# ಅಚಲ

ತಿಂಗಳ ಪತ್ರಿಕೆ

ಡಿಸೆಂಬರ್ - 2003

19

## ಒಳಗೇನಿದೆ


✦ 'ಹಾಡುವ ಹಾಲಕ್ಕಿ' ಸುಕ್ರಿ ಬೊಮ್ಮಗೌಡ

- ಡಾ|| ಹಿ. ಚಿ. ಬೋರಲಿಂಗಯ್ಯ

✦ ಹೆಣ್ಣಿನ ದೇಹವೆಂಬ ಮಾರಾಟ ವಸ್ತು

- ಡಾ. ಎಲ್. ಜಿ. ಮೀರಾ

✦ ಬನ್ನಿ ಸಾಧನೆಯ ರಂಗಕ್ಕೆ....

- ನೇಮಿಚಂದ್ರ

✦ ಮಹಿಳೆಯರಿಗೆ ಆತಂಕ ತಂದ ತೀರ್ಪು

- ಹೇಮಲತಾ ಮಹಿಷಿ

✦ ಗರ್ಭನಿರೋಧಕ ಲಸಿಕೆ

- ಡಾ|| ವಸುಂಧರಾ ಭೂಪತಿ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 18 ಸಂಚಿಕೆ : 12

ಸಂಪಾದಕ ಮಂಡಲಿ

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಕಳೆದ 18 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಪ್ರಭುತ್ವದ ಕ್ರೌರ್ಯಕ್ಕೆ ಸುರುಟಿಹೋದ ಕುಸುಮಗಳು

ಹಿಂದೆ ಆಂಧ್ರಪ್ರದೇಶ, ಬಿಹಾರ್, ಮಧ್ಯಪ್ರದೇಶ, ಒರಿಸ್ಸಾ, ಪಶ್ಚಿಮಬಂಗಾಳ, ಕೇರಳ ಇತ್ಯಾದಿ ರಾಜ್ಯಗಳಲ್ಲಿ ವ್ಯಾಪಿಸಿದ್ದ ನಕ್ಸಲೀಯರ ಚಳುವಳಿ ಇಂದು ಕರ್ನಾಟಕದಲ್ಲೂ ಕಾಣಿಸಿಕೊಂಡಿದೆ. ಯಾವುದೇ ಸಮಾಜದಲ್ಲಿ ಹೋರಾಟಗಾರರು ನಕ್ಸಲವಾದಿಗಳಾಗಲು ಅಲ್ಲಿನ ಪ್ರಭುತ್ವವೇ ಬಹುಪಾಲು ಕಾರಣವಾಗಿರುತ್ತದೆ. ಪ್ರಜಾಸತ್ತಾತ್ಮಕ ಹೋರಾಟಗಳನ್ನು ಮನ್ನಿಸಿ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ಮುಂದಾಗಿದ್ದಲ್ಲಿ ಇಂತಹ ಸ್ಥಿತಿ ನಿರ್ಮಾಣವಾಗುತ್ತಲೇ ಇರಲಿಲ್ಲ. ಜನರ ಸಮಸ್ಯೆಗಳನ್ನು ಸರ್ಕಾರ ಬಗೆಹರಿಸದೆ ಬಂಡವಾಳಶಾಹಿಗಳ ಏಜೆಂಟನಂತೆ ಸರ್ಕಾರ ವರ್ತಿಸತೊಡಗಿದರೆ ಹೋರಾಟಗಾರರ ಕೋಪಕ್ಕೆ ಪಾತ್ರವಾಗಬೇಕಾಗುತ್ತದೆ. ಕರ್ನಾಟಕದಲ್ಲಿ ಆದದ್ದು ಅದೇ. ಕುದುರೆಮುಖ ಗಣಿಗಾರಿಕೆಗೆ ಅವಕಾಶ ಕಲ್ಪಿಸಿ, ರಾಷ್ಟ್ರೀಯ ಉದ್ಯಾನವನದ ಹೆಸರಿನಲ್ಲಿ ನಮ್ಮ ನೆಲವನ್ನು ಸಾಮ್ರಾಜ್ಯಶಾಹಿಗಳಿಗೆ ಒತ್ತೆಯಿಡಲು ಮುಂದಾದ ರಾಜ್ಯ ಸರ್ಕಾರದ ಕ್ರಮವನ್ನು ವಿರೋಧಿಸಲು ಜನಪರ ಪ್ರಜಾಸತ್ತಾತ್ಮಕ ಹೋರಾಟ ನಡೆಯುತ್ತಲೇ ಇದೆ. ಅಂತಹ ಹೋರಾಟದಲ್ಲಿ ಮಹಿಳೆಯರೂ ಭಾಗಿಯಾಗಿದ್ದಾರೆ, ಎನ್ನುವುದು ಕುತೂಹಲಕರವಾದರೂ ಸತ್ಯ.

'ಪ್ರಗತಿ'ಯ ಹೆಸರಿನಲ್ಲಿ ಆರಣ್ಯವಾಸಿ, ಗುಡ್ಡಗಾಡುವಾಸಿ ಜನರಿಗೆ ಬದುಕುವ ಹಕ್ಕನ್ನೇ ನಿರಾಕರಿಸ ಹೋರಾಟ ಸರ್ಕಾರದ ಕ್ರಮದ ವಿರುದ್ಧ ಹೋರಾಟ ನಡೆಸಿದ ಕಾಮ್ರೇಡ್ ಪಾರ್ವತಿ ಮತ್ತು ಕಾಮ್ರೇಡ್ ಹಾಜಿಮಾ ಪೋಲೀಸರ ದುಷ್ಕೃತ್ಯದಿಂದ ಇಂದು ಮಣ್ಣಾಗಿ ಹೋಗಿದ್ದಾರೆ. ಅವರ ಸಂಘಟನೆಯ ವೈಚಾರಿಕ ಸ್ವರೂಪದ ಬಗ್ಗೆ, ತುಳಿದ ಹಾದಿಯ ಬಗ್ಗೆ ಭಿನ್ನಾಭಿಪ್ರಾಯಗಳಿರಲೂ ಸಾಕು. ಆದರೂ ಆ ಎರಡು ಎಳೆಯ ಜೀವಗಳು ನಡೆಸಿದ ಹೋರಾಟದ ಗುರಿಯಲ್ಲಿ ಪ್ರಾಮಾಣಿಕತೆಯಿತ್ತು ಎಂಬುದನ್ನು ಯಾರೂ ಅಲ್ಲಗಳೆಯಲಾಗದು. ಮನೆಯೊಂದರಲ್ಲಿ ವಿಶ್ರಮಿಸುತ್ತಿದ್ದ ಈ ಇಬ್ಬರು ಮಹಿಳೆಯರು ಮತ್ತು ಅವರ ಸಂಗಾತಿ ಯಶೋಧ - ಮೂವರ ಮೇಲೆ ಪೋಲೀಸರು ನಡೆಸಿದ ಏಕಮುಖವಾದ ಗುಂಡಿನ ದಾಳಿಗೆ 'ಪೋಲೀಸ್ ಎನ್‌ಕೌಂಟರ್' ಎನ್ನುವುದು ಎಷ್ಟೊಂದು ಅಪಹಾಸ್ಯದ ಮಾತು.

ನವೆಂಬರ್ ಹನ್ನೊಂದರಂದು ಕಾರ್ಕಳ ತಾಲ್ಲೂಕಿನಲ್ಲಿ ನಡೆದ ಈ ಸಂವಿಧಾನಾತ್ಮಕ ಕೊಲೆ ನಮ್ಮ ವ್ಯವಸ್ಥೆಯ ಕರಾಳ ಮುಖವನ್ನು ಬಯಲುಮಾಡುತ್ತದೆ. ತೀವ್ರವಾದಿಗಳೋ, ನಕ್ಸಲ್‌ವಾದಿಗಳೋ ಯಾವುದೇ ಹಣೆಪಟ್ಟಿ ಕಟ್ಟಿದರೂ ಈ ಇಬ್ಬರು ಮಹಿಳೆಯರು ದೊಡ್ಡ ಕನಸಿನ ಹಿಂದೆ ಹೊರಟರು. ವಿಶ್ವಸುಂದರಿ ಸ್ಪರ್ಧೆಯನ್ನು ವಿರೋಧಿಸಿ ನಡೆಸಿದ ಹೋರಾಟದಲ್ಲಿ, ಬಾಬಾ ಬುಡನ್ ಗಿರಿಯಲ್ಲಿ ಶಾಂತಿಗಾಗಿ ನಡೆಸಿದ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಸಮಾಜವಾದದ ಗುರಿಯೊಂದಿಗೆ, ಕೆಂಬಾವುಟ ಹಿಡಿದು ಹೊರಟ ಇವರಲ್ಲಿ ಹಸಿವು, ಬಡತನ ನಿರ್ಮೂಲನ ಮಾಡುವ ಛಲವಿತ್ತು. ಈ ವ್ಯವಸ್ಥೆಯನ್ನು ಕಿತ್ತೆಸೆಯುವ ಆತ್ಮಸ್ಥೈರ್ಯವಿತ್ತು. ಆದರೆ ಸರ್ಕಾರದ ಕ್ರೌರ್ಯದ ಬಿಸಿಗೆ ಹೋರಾಟದ ಈ ಕುಸುಮಗಳು ನೆಲಕ್ಕುರಳಬೇಕಾಯಿತು.

ನ್ಯಾಯಕ್ಕಾಗಿ, ಶಾಂತಿಗಾಗಿ ಹೋರಾಡುವವರನ್ನು ಸರ್ಕಾರ ಈ ರೀತಿ ನಡೆಸಿಕೊಳ್ಳುತ್ತಿರುವುದು ಆಶ್ಚರ್ಯವೇನಲ್ಲ. ಇಂದಿನ ನಮ್ಮ ಸರ್ಕಾರದ ರೀತಿನೀತಿಗಳು ಕೋಮುವಾದಿಗಳ ಪರವಾಗಿರುವುದು, ದಂಗೆಕೋರರ ಪರವಾಗಿರುವುದನ್ನು ಇವತ್ತಿನ ವಿದ್ಯಮಾನಗಳು ಸ್ಪಷ್ಟಪಡಿಸುತ್ತಿವೆ. ಕೋಮುದ್ವೇಷ ಬಿತ್ತಿ ಬಾಬಾಬುಡನ್‌ಗಿರಿಯನ್ನು ಅಯೋಧ್ಯೆ ಮಾಡುತ್ತೇವೆಂದು ಹೊರಟ ಹಿಂದೂ ಭಯೋತ್ಪಾದಕರನ್ನು ರಸ್ತೆ ರಸ್ತೆಯಲ್ಲಿ ವಿಜೃಂಭಿಸಲು ಬಿಟ್ಟು ಶಾಂತಿ-ಸೌಹಾರ್ದದ ಮಂತ್ರ ಹೇಳುವ ಶಾಂತಿ ಚಳುವಳಿಯ ಜನಸಮುದಾಯವನ್ನು ಜೈಲಿಗಟ್ಟಿ ವಿಕಟ ಅಟ್ಟಹಾಸ ಮೆರೆಯುತ್ತಿದೆ. ಆನೇಕಲ್ಲಿನ ಪುರಸಭಾಸದಸ್ಯೆಯ ಆತ್ಮಹತ್ಯೆಗೆ ಕಾರಣವಾದ ಕೊಲೆಗಡುಕರನ್ನು ರಾಜಾರೋಷವಾಗಿ ಓಡಾಡಿಕೊಂಡಿರಲು ಬಿಟ್ಟು ನ್ಯಾಯಕ್ಕಾಗಿ, ಶಾಂತಿಗಾಗಿ ಚಳುವಳಿ ಮಾಡುವವರನ್ನು ಗೃಹಬಂಧನ ಮಾಡಿ ತಮ್ಮ ಪೌರುಷವನ್ನು ಮೆರೆಯುವುದು ಇಂದಿನ ಸರ್ಕಾರದ ನೀತಿಯಾಗಿದೆ.

ಕರ್ನಾಟಕದ ರಾಜಕೀಯದಲ್ಲಿ ಪಾರ್ವತಿ, ಹಾಜಿಮಾರ ಸಾವು ಸಾಮಾಜಿಕ ಹೋರಾಟಕ್ಕೆ ಹೊಸದಿಕ್ಕು ತೋರಿಸುತ್ತದೆ. ಅವರು ತಮ್ಮ ತ್ಯಾಗದಿಂದ ನಮ್ಮಲ್ಲೊಂದು ಪಾಪ ಪ್ರಜ್ಞೆ ಹುಟ್ಟಿಸುತ್ತಾರೆ. ಎಲ್ಲೋ ಒಂದು ಕಡೆ ಪ್ರಸಿದ್ಧಿಗಾಗಿ, ಪೈಪೋಟಿಗಾಗಿ, ಅಸ್ತಿತ್ವಕ್ಕಾಗಿ ಒದ್ದಾಡುವ ಮನಸ್ಸುಗಳು ಈ ಇಬ್ಬರು ಜೀವಿಗಳ ಹೋರಾಟದಿಂದ ಕಲಿಯುವುದು ಬಹಳಷ್ಟಿದೆ. ಯಾರ ಕಣ್ಣಿಗೂ ಕಾಣದೆ, ಯಾವ ಪ್ರಸಿದ್ಧಿಯನ್ನೂ ಬಯಸದೆ, ಗುಪ್ತಗಾಮಿನಿಯಾಗಿ ಹರಿಯುತ್ತಲೇ, ವ್ಯವಸ್ಥೆಯ ಕ್ರೌರ್ಯಕ್ಕೆ ಬಲಿಯಾದ ಈ ಎರಡು ವೀರ ಚೇತನಗಳಿಗೆ 'ಅಚಲ'ದ ಕೆಂಪು ನಮನ.

- ಎನ್. ಗಾಯತ್ರಿ

# 'ಹಾಡುವ ಹಾಲಕ್ಕಿ' ಸುಕ್ರಿ ಬೊಮ್ಮಗೌಡ

**- ಡಾ|| ಹಿ. ಚಿ. ಬೋರಲಿಂಗಯ್ಯ**

ಗಿರಿಜನರಿಗಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟು ಅವರಿಗಾಗಿ ದುಡಿದ ವೆರಿಯಲ್ ಎಲ್ವಿನ್ ಒಮ್ಮೆ ಮಧ್ಯಪ್ರದೇಶದ ಗೊಂಡರ ಕಲಾವಿದನೊಂದಿಗೆ ಮಾತಾಡುತ್ತಿರುತ್ತಾರೆ. ತನ್ನ ಹಾಡಿಯ ಹತ್ತಿರದಿಂದ ಹಾದು ಹೋದ ಹೊಸ ರೈಲು ಹಳಿಗಳನ್ನು ಕುರಿತು ಆ ಕಲಾವಿದ ಹೀಗೆ ಹೇಳುತ್ತಾನೆ - 'ಮೊದಲಿಗೆ ನಾವೆಲ್ಲಾ ನಮ್ಮ ದೇವರ ಕೃಪೆಯಿಂದ ತುಂಬಾ ಸಿರಿವಂತರಾಗಿದ್ದೆವು. ಆರೋಗ್ಯವಾಗಿದ್ದೆವು. ಅಷ್ಟರಲ್ಲಿ ರೈಲು ಬಂತು. ಈ ರೈಲಿನ ಚಂದ ನೋಡಿ ನಮ್ಮ ದೇವರು ಕೂಡ ಅದನ್ನು ಹತ್ತಿ ಪಟ್ಟಣಕ್ಕೆ ಹೊರಟುಹೋದ. ಈಗ ನಾವೆಲ್ಲ ಬಡವರಾಗಿದ್ದೇವೆ. ಪಟ್ಟಣದವರು ಸಿರಿವಂತರಾಗಿದ್ದಾರೆ'. ಆಧುನಿಕತೆ ಗಿರಿಜನರ ಬದುಕಿನ ಮೇಲೆ ಹೇಗೆ ಪರಿಣಾಮ ಬೀರುತ್ತಿದೆ ಎಂಬುದಕ್ಕೆ ಇದೊಂದು ಉದಾಹರಣೆ.

ಜಾನಪದ ಕ್ಷೇತ್ರದಲ್ಲಿನ ತನ್ನ ಕಲಾ ಸೇವೆಗಾಗಿ ಕರ್ನಾಟಕ ಸರ್ಕಾರದ ಅತ್ಯುನ್ನತ 'ಜಾನಪದಶ್ರೀ' ಪ್ರಶಸ್ತಿ ಪಡೆದ ಸುಕ್ರಿ ಬೊಮ್ಮಗೌಡ ಅವರನ್ನು ಮಾತಾಡಿಸಿ ಬರಬೇಕೆಂದು ಹೊರಟ ನನಗೆ ಮೇಲಿನ ರೀತಿಯ ಪ್ರಶ್ನೆಗಳೇ ಎದುರಾದವು. ಉತ್ತರ ಕನ್ನಡಕ್ಕೆ ಕೊಂಕಣ ರೈಲು ಬಂತು, ಸೀಬರ್ಡ್ ನೌಕಾ ನೆಲೆ ಬಂತು, ಕೈಗಾ ಬಂತು ಹಾಗೂ ವಿದ್ಯುತ್ತಿನ ಅನೇಕ ಅಣೆಕಟ್ಟುಗಳು ನಿರ್ಮಾಣವಾದವು. ಉತ್ತರ ಕನ್ನಡ ಜಿಲ್ಲೆ ಅಭಿವೃದ್ಧಿಯ ದಾಪುಗಾಲಿನಲ್ಲಿದೆ ಎಂಬುದು ನಮ್ಮೆಲ್ಲರ ನಂಬಿಕೆ. ಆಧುನಿಕ ಭಾರತದ ನಿರ್ಮಾಣಕ್ಕೆ ಇವೆಲ್ಲವೂ ಬೇಕೆಂಬುದು ನಿಜ. ಆದರೆ ದೊಡ್ಡ ದೊಡ್ಡ ಯೋಜನೆಗಳು ಸಣ್ಣ ಸಮುದಾಯಗಳ ಕನಸುಗಳನ್ನು ಹೇಗೆ ನಾಶಗೊಳಿಸುತ್ತವೆ ಎಂಬುದರ ಕಡೆಗೂ ನಮ್ಮ ಲಕ್ಷ್ಯವಿರಬೇಕಾಗುತ್ತದೆ. "ಇದರಿಂದ ನಮಗೆ ಒಳ್ಳೆಯದಂತೂ ಆಗಲಿಲ್ಲ, ನಮ್ಮ ಜಮೀನು ಹೋಯಿತು, ಮನೆ ಮಠ ಹೋದವು, ಭೂಮಿಯನ್ನೇ ನಂಬಿದ ನಮ್ಮ ಸಮಾಜಕ್ಕೆ ಇದರಿಂದ ಕೆಡುಕೇ ಹೆಚ್ಚಾಯಿತು" ಎಂದು ಕೊಂಕಣ ರೈಲ್ವೆ ಬಗ್ಗೆ ಹೇಳುವ ಸುಕ್ರಿ ಅರಣ್ಯ ನಾಶ ಮಾಡುತ್ತಿರುವವರ ವಿರುದ್ಧ ತೀವ್ರ ನೋವಿನಿಂದ ಕಿಡಿ ಕಾರುತ್ತಾಳೆ. "ಆಗ ಅರಣ್ಯ ಹೇಗಿತ್ತು? ನಿಮಗೆ ಗೊತ್ತಿಲ್ಲ ಸುತ್ತಲ ಏಳೇಳು ಲೋಕವೂ ಅರಣ್ಯವೇ, ಅರಣ್ಯ ಬಿಟ್ಟರೆ ಸಮುದ್ರ ಅಷ್ಟೆ. ಈಗ ಬರೇ ಎಕ್ಕೇಸನ್ (ಅಕೇಶಿಯಾ) ಗಿಡ. ಅದರ ಅಡಿಯಲ್ಲಿ ಹುಲ್ಲೂ ಹುಟ್ಟುವುದಿಲ್ಲ, ಬರೀ ಬೆಂಕಿ." ಇದು ಸುಕ್ರಿಯ ಅನುಭವದ ಮಾತು.

ಉತ್ತರ ಕನ್ನಡ ಜಿಲ್ಲೆ ಪ್ರಕೃತಿಗ ಹೆಸರಾದ ತಾಣ. ಕಡಲು ಮತ್ತು ಪರ್ವತಗಳ ನಿರಂತರ ಚುಂಬನ ಇಲ್ಲಿ ನಡೆಯುತ್ತದೆ. ಗುಡುಗುಡುಸಿ ಹರಿದು ಬರುವ ನದಿಗಳು ಕ್ರಮೇಣ ಪ್ರಶಾಂತವಾಗಿ ವಿಶಾಲವಾಗುತ್ತಾ ಬೆಟ್ಟ ಪಂಕ್ತಿಗಳನ್ನು ತಬ್ಬಿಕೊಳ್ಳುತ್ತಾ ಸಮುದ್ರದಲ್ಲಿ ಲೀನವಾಗುವ ರೀತಿಯಂತೂ ಅಸದೃಶ. ಅಂಕೋಲದಿಂದ ನಾಲ್ಕೈದು ಕಿ.ಮೀ. ಪಶ್ಚಿಮಕ್ಕೆ, ಮೊರೆವ ಸಾಗರದಿಂದ ಕೆಲವೇ ಅಡಿಗಳ ಈಚೆ ಇರುವ ಒಂದು ಸುಂದರ ಬಡಗೇರಿ. ಉತ್ತರ ಕನ್ನಡದ ಹಾಲಕ್ಕಿ ಒಕ್ಕಲಿಗರ ಅನೇಕ ಕೊಪ್ಪಗಳಲ್ಲಿ ಬಡಗೇರಿಯೂ ಒಂದು. ಬಡಗೇರಿಯ ಪುಟ್ಟ ರಸ್ತೆಯಲ್ಲಿನ ಇಕ್ಕೆಲಗಳಲ್ಲಿ ತೆಂಗಿನ ತೋಟಗಳ ನಡುವೆ ಗೊಪ್ಪೆಗೊಪ್ಪೆಯಾಗಿ ಕಟ್ಟಿಕೊಂಡ ನೂರಾರು ಗುಡಿಸಲುಗಳು. ಗುಡಿಸಲ ಮುಂದೆ ಕನ್ನಡಿಯಂತೆ ಹೊಳೆವ ಸರಿಸಿ ಅಂದಗೊಳಿಸಿದ ಅಂಗಳ. ಅಂಗಳ ಮತ್ತು ಗುಡಿಸಲ ಗೋಡೆಯ ತುಂಬ ರಂಗೋಲಿ, ಚಿತ್ತಾರ. ಹಾಲಕ್ಕಿ ಹೆಣ್ಣುಮಕ್ಕಳು ಪ್ರಕೃತಿಯ ಒಡಲಿನ ಸೌಂದರ್ಯವತಿಯರು. ಮುಗ್ಧತೆಯೇ ಮೈವೆತ್ತ, ಎಣ್ಣೆಗೆಂಪಿನ ಮಂದಹಾಸದ ತುಟಿಗಳು. ಕುಪ್ಪಸವಿಲ್ಲದ ಬತ್ತಲು ಎದೆಗೆ ಇಳಿಬಿಟ್ಟ ರಂಗುರಂಗಿನ ಹತ್ತಾರು ಮಣಿಸರಗಳ ಮಾಲೆ, ನೀಳತೋಳಿಗೆ ತೋಳಬಂದಿ, ಕಾಲಿಗೆ ಕಡಗ, ಎಲೆ ಅಡಿಕೆಯ ರಂಗಿಗೆ ಕೆಂಪಾದ ಹಲ್ಲುಗಳು. ಸದಾ ಬಿಸಿಲಿಗೆ ತೆರೆದುಕೊಂಡ ಬತ್ತಲೆ ಬೆನ್ನಿನ ಕಡುಗಪ್ಪು ಬಣ್ಣ ಅವರ ಶ್ರಮದ ಸಂಕೇತ. ಅವರ ದಷ್ಟಪುಷ್ಟ ಮೈಕಟ್ಟು ಮತ್ತು ಮಂದಹಾಸ ಅವರ ನಿರಂತರ ದುಡಿಮೆಯನ್ನು ಆರೋಗ್ಯಕರ ಮನಸ್ಸನ್ನು ಪ್ರತಿನಿಧಿಸುತ್ತದೆ. ಇಂತ ಹಾಲಕ್ಕಿ ಹೆಂಗಸರಲ್ಲಿ ತಾನೂ ಒಬ್ಬಳಾಗಿ ವಾಸಿಸುತ್ತಿರುವ ಕಲಾವಿದೆ ಸುಕ್ರಿ. ಕೂತಲ್ಲಿ ನಿಂತಲ್ಲಿ ನೂರು ಹಾಡುಗಳನ್ನು ಚೆಲ್ಲಬಲ್ಲ ಮಾಟಗಾತಿ. ಸೋಬಾನೆ, ಜೋಗೂಳ, ದೇವರ ಪದಗಳು, ಕಥನ ಕವನಗಳು ಮುಂತಾಗಿ ಹೇರಳ ಸಂಪತ್ತನ್ನೇ ತನ್ನೆದೆಯಲ್ಲಿ ತುಂಬಿಕೊಂಡಿರುವ ಸುಕ್ರಿ ಹಾಡಲು ಕುಳಿತಳೆಂದರೆ ಹಲವು ರಾತ್ರಿಗಳು ಹಗಲಾಗುತ್ತವೆ. ಕೇಳಲು ಕುಳಿತು ಮನಸ್ಸುಗಳು ಮುದಗೊಳ್ಳುತ್ತವೆ. ಇಂಥ ಸಮೃದ್ಧ ಹಾಡುಗಾರ್ತಿ ಸುಕ್ರಿ ಕೇವಲ ಪದ ಹಾಡುವವಳಷ್ಟೇ ಅಲ್ಲ, ಹರಳು ಹುರಿದಂತೆ ನಿರರ್ಗಳವಾಗಿ ಮಾತನಾಡುತ್ತಾ ಎಂಥವರ ಜೊತೆಗೂ ವಾದಕ್ಕೂ ಇಳಿಯಬಲ್ಲ ಛಲಗಾತಿ. ಹಾಲಕ್ಕಿ ಒಕ್ಕಲಿಗರ ಬಡತನ, ಉತ್ತರ ಕನ್ನಡದ ಆರ್ಥಿಕ ಸಾಮಾಜಿಕ ಅಸಮಾನತೆ, ಪರಿಸರ ನಾಶ, ಮದ್ಯಪಾನ ಪಿಡುಗು ಮುಂತಾಗಿ ತನ್ನದೇ ಅನಿಸಿಕೆಗಳನ್ನು ನಿರ್ಭೀತಿಯಿಂದ ಬಿಚ್ಚಿಡುತ್ತಾಳೆ ಸುಕ್ರಿ. ಒಂದಕ್ಷರವನ್ನೂ ಕಲಿಯದ ಈ ನಿರಕ್ಷರ ಕುಕ್ಷಿಯ ಎದೆಯಲ್ಲಿ ಬಹುದೊಡ್ಡ ಜ್ಞಾನಜ್ಯೋತಿಯಂತೂ ಇದೆ. ಅದರ ಪ್ರಭೆ ಅಕ್ಷರ ಕಲಿತವರನ್ನು ಮಣಿಸುತ್ತದೆ. ಮಹಾಕವಿಯೊಬ್ಬನ ಸಾನಿಧ್ಯದಂತೆ ಅಲ್ಲಿ ಅವರ್ಣನೀಯ ಅನುಭವ ಉಂಟಾಗುತ್ತದೆ. ಪ್ರತಿಯೊಂದು ಕಥೆಯ ಮೂಲಕ, ಹಾಡಿನ ಮೂಲಕ ಅಥವಾ ದೃಷ್ಟಾಂತಗಳ ಮೂಲಕವೇ ವರ್ಣಿಸಿ ಹೇಳುವ ಸುಕ್ರಿ ಹುಟ್ಟು ಕಲಾವಿದೆ ಎಂಬುದಂತೂ ನಿರ್ವಿವಾದ.

ಸುಮಾರು 65 ವರ್ಷಗಳನ್ನು ಕಳೆದಿರುವ ಸುಕ್ರಿಯ ಜೀವನ ಕೂಡ ಒಂದು ಕಾದಂಬರಿಗೆ ವಸ್ತುವಾಗುವಂಥದ್ದು. ತನ್ನ

ಹನ್ನೆರಡನೇ ವರ್ಷಕ್ಕೆ ಮದುವೆಯಾದ ಸುಕ್ರಿಯನ್ನು ಗಂಡನ ಮನೆಗೆ ಹೆಗಲ ಮೇಲೆ ಕೂರಿಸಿಕೊಂಡು ಹೊತ್ತು ತರುತ್ತಾರೆ. ಮದುವೆಯಾದ ಬೊಮ್ಮಗೌಡನಿಗೆ ಆಗ ನಲವತ್ತೆಂಟು ವರ್ಷಗಳಂತೆ! ಹೆಣ್ಣುಗಳು ಸಿಗುವುದೇ ಅಪರೂಪವಾಗಿದ್ದ ಆ ಕಾಲದಲ್ಲಿ ಬೊಮ್ಮಗೌಡ ಕಾದು ಕಾದು 12 ವರ್ಷದ ಬಾಲೆ ಸುಕ್ರಿಯನ್ನು ವರಿಸಿದ್ದ ! ''ಅಮ್ಮನೋರು ಮೈನೆರೆದಾಗ ಅಯ್ಯನೋರು ದಂಡಿಗೆ ಏರುದ್ರು'' ಎಂದೂ 'ಮುದುಕನ ಹೆಂಡತಿ' ಎಂದೂ ಜನ ಕೀಟಲೆ ಮಾಡಿದ್ದುಂಟು. ಕೂಲಿಯೇ ಜೀವನ, ಕಟ್ಟಿಕೊಂಡವನೇ ದೈವ ಎಂದು ಸುಕ್ರಿ ಬಾಳಿದಳು. ಗಂಡ ತೀರಿಕೊಂಡಾಗ ಸುಕ್ರಿಗೆ ಇನ್ನೂ ಹರೆಯ. ಅಂಕೋಲಾ ತಾಲೂಕಿನ ಅಂಬಾರಕೊಡ್ಲಿನ ಶಿರ್ಕುಲಿಯಲ್ಲಿ ಜನ್ಮತಾಳಿದ ಸುಕ್ರಿ ತಾನು ಹುಟ್ಟಿದಾಗಿನಿಂದಲೂ ಕೂಲಿ ಮಾಡಿ ಬದುಕಿದವಳೇ. 'ಅವರೆಲ್ಲ ಎರಡು ಸಿದ್ದೆ ಅಕ್ಕಿ ತಂದರೆ ನಾನು ಒಂದು ಸಿದ್ದೆಯನ್ನಾದ್ರೂ ತರುತ್ತಿದ್ದೆ' ಎನ್ನುವ ಸುಕ್ರಿಗೆ ಮಹಾ ಸ್ವಾಭಿಮಾನ. ಅಷ್ಟೆಲ್ಲ ಕಷ್ಟದಲ್ಲಿ ಬೆಳೆದುಬಂದ ಅನುಭವವಿದ್ದುದರಿಂದಲೇ ವಿಧವೆಯಾಗಿಯೂ ಸ್ವಾಭಿಮಾನಿ ಬದುಕನ್ನೇ ಸುಕ್ರಿ ನೀಸಿದ್ದಾಳೆ. ಇವತ್ತಿಗೂ ಕೂಲಿಯೇ ಜೀವನಾಧಾರ. ಹಾಲಕ್ಕಿ ಸಮಾಜದಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿದೆ. ಹಾಗೆ ಆಗಬಹುದಿತ್ತಲ್ಲಾ ಎಂಬ ಪ್ರಶ್ನೆ ಹಾಕಿದ್ದೇ ತಡ, ಸುಕ್ರಿ ಒಂದು ಹಾಡಿನ ಮೂಲಕ ಕಥೆ ಹೇಳಲು ಆರಂಭಿಸಿದಳು. ಅದು ಒಂದು ನವಿಲಿನ ಕಥೆ. ಗಂಡು ನವಿಲಿಗೆ ಬಾಣ ಬಿದ್ದು ಸಾಯುತ್ತದೆ. ಬಾಣ ಬಿಟ್ಟ ಬೇಟೆಗಾರ ಇನ್ನೊಂದು ಗಂಡನ ತರಿಸಿಕೊಡುವೆ ಎನ್ನುತ್ತಾನೆ. ಇದ್ದ ಪತಿಯೇ ಹೋದಮ್ಯಾಲೆ ಮತ್ತೊಂದು ಗಂಡನ ಗೊಡವೆಯಾಕೆ? ಬೇಡ ಎಂದು ಹೆಣ್ಣು ನವಿಲು ತಿರಸ್ಕರಿಸುತ್ತದೆ. ನವುಲಕ್ಕಿಯೇ ಹಾಗೆ ಮಾಡಿದಾಗ ನರಮನುಷ್ಯೆಯಾದ ನಾನು ಯಾಕೆ ಹಾಗೆ ಮಾಡಬೇಕು? ಇದು ಸುಕ್ರಿಯ ಅಂತರಾಳದ ನೈತಿಕ ನಂಬಿಕೆ.

ಸುಕ್ರಿ ಇಷ್ಟೆಲ್ಲ ಹಾಡು ಕತೆ ಕಾವ್ಯಗಳನ್ನು ಹೇಗೆ ಕಲಿತಳು? ಹಾಗೆ ನೋಡಿದರೆ ಇಡೀ ಹಾಲಕ್ಕಿ ಸಮಾಜವೇ ಸಾಂಸ್ಕತಿಕವಾಗಿ ಅತ್ಯಂತ ಶ್ರೀಮಂತವಾದದ್ದು. ಶಿವ ಮತ್ತು ಪಾರ್ವತಿಯರು ಕೊಟ್ಟ ಹಾಲು-ಅಕ್ಕಿಯಿಂದಲೂ, ಬಲೀಂದ್ರದೇವ ನೀಡಿದ ಭೂಮಿ ಮತ್ತು ಬೆಳೆಯಿಂದಲೂ ನಾವು ಬದುಕಿದ್ದೇವೆ ಎಂದು ನಂಬುವ ಈ ಜನರ ಇಡೀ ಬದುಕು ಬಣ್ಣ ಬಣ್ಣದ್ದು. ಸುಗ್ಗಿ ಹಬ್ಬ, ತೊಳಸಿ ಹಬ್ಬ, ಹೊಸತಿನ ಹಬ್ಬ, ಬೂರೆ ಹಬ್ಬ, ಗದ್ದೆ ಗಂಡನ ಹಬ್ಬ, ಬಲೀಂದ್ರನ ಹಬ್ಬ ಮುಂತಾಗಿ ತಮ್ಮದೇ ವೈಶಿಷ್ಟ್ಯದ ಹಬ್ಬಾಚರಣೆಗಳನ್ನು ಮಾಡುವ ಇವರಲ್ಲಿ ಅಳೆದಷ್ಟೂ ಹಾಡುಗಳ ಬಳ್ಳ, ಮೊಗೆದಷ್ಟೂ ಕಥೆಗಳ ಸಾಗರ. ಗುಮಟೆಯ ಸದ್ದಿಗೆ ತಕ್ಕಂತೆ ಕುಣಿಯುತ್ತಾ ಹಾಡುವ ಗಂಡಸರ ಲೆಕ್ಕವಿಲ್ಲದಷ್ಟು ಸುಗ್ಗಿ ಹಾಡುಗಳಿಗೆ ಸರಿಸಮನಾಗಿ ಹೆಂಗಸರ ಹಾಡುಗಳೂ ಇವೆ. ತಮ್ಮದೇ ನ್ಯಾಯಪದ್ಧತಿ, ತಮ್ಮದೇ ವೈವಾಹಿಕ ಪದ್ಧತಿ ಹಾಗೂ ತಮ್ಮದೇ ಆದ ಹಲವು ಪರಂಪರಾಗತ ಜ್ಞಾನಪದ್ಧತಿಗಳನ್ನು ಈಗಲೂ ಉಳಿಸಿಕೊಂಡು ಬಂದಿದ್ದಾರೆ ಹಾಲಕ್ಕಿಗಳು. ಇಂಥ ಹಾಲಕ್ಕಿಗಳ ಸುಂದರ ಸಮಾಜದಲ್ಲಿ ಅರಳಿದ ಕಾಡಿನ ಕುಸುಮ ನಮ್ಮ ಸುಕ್ರಿ. ತನ್ನ ತಾಯಿಯಾದ ದೇವಿ ಮತ್ತು ಅಜ್ಜಿಯಿಂದ ಆರಂಭದಲ್ಲಿ ಕಲಿತು ನಂತರ ತನ್ನ ಪರಿಸರದಿಂದ ಹಾಡು ಕಲಿತ ಸುಕ್ರಿ, ತನ್ನ ಪ್ರತಿಭಾಶಕ್ತಿಯನ್ನು ಅದಕ್ಕೆ ಬೆರೆಸಿ ಹೊಸ ಹೊಸ ಜಾನಪದ ಹಾಡುಗಳ ಉದಯಕ್ಕೆ ಕಾರಣಳಾದವಳು. ತನ್ನ ಮುಂದೆ ನಿಂತ ಯಾರನ್ನು ಕುರಿತು ಬೇಕಾದರೂ ತಟ್ಟನೆ ಹಾಡುಕಟ್ಟಿ ಹಾಡಬಲ್ಲ ಜಾಣ್ಮೆಯುಳ್ಳ ಸುಕ್ರಿ ಪರಂಪರೆಯನ್ನು ಕೂಡ ಬಿಟ್ಟವಳಲ್ಲ. ಮೂಲಧಾಟಿ, ಬನಿ ಹಾಗೂ ಧನಿಗಳನ್ನು ಕಾಪಾಡಿಕೊಂಡು ಬಂದದ್ದಲ್ಲದೆ ತನ್ನ ಸುತ್ತಲ ಬಳಗಕ್ಕೂ ಅದನ್ನು ಕಲಿಸುವ ಹಠ ಮತ್ತು ಔದಾರ್ಯ ಅವಳದು. ಮಾದೇವರಾಯ, ಚಂದನರಾಯ, ರಾಮ-ಲಕ್ಷ್ಮಣ, ಐರಾವತ, ಕುಂತಿಕಥೆ, ಸಿರಿಕವುಲಿ ಮುಂತಾದ ಕಾವ್ಯಗಳನ್ನು ಹಾಡುವ ಸುಕ್ರಿ ಬಲೀಂದ್ರರಾಯ, ಗೋವಿಂದರಾಯ, ತಂಗಿ ತುಳಸಮ್ಮ ಹಾಗೂ ಕರಿದೇವರ ಬಗೆಗಿನ ಕಥನ ಕವನಗಳನ್ನು ಹಾಡುತ್ತಾಳೆ. ಕಳೆ, ನಾಟಿ, ಮದುವೆ, ಸೋಬಾನೆ, ಸುಗ್ಗಿ ಮುಂತಾದ ಬಿಡಿ ಹಾಡುಗಳಿಗಂತೂ ಲೆಕ್ಕವಿಲ್ಲ.

ಆಧುನಿಕ ವ್ಯವಸ್ಥೆ ಹಾಗೂ ಕಲುಷಿತಗೊಂಡ ಮನಸ್ಸುಗಳ ಬಗ್ಗೆ ಸುಕ್ರಿಗೆ ಎಲ್ಲಿಲ್ಲದ ಕೋಪ. ತಮ್ಮ ಸಮಾಜದ ಗೌಡ-ಬುಧವಂತರ 'ಸೀಮೆ ಹಾಗೂ ಚಪ್ಪರಕೂಟ'ದ ನ್ಯಾಯಪದ್ಧತಿಯೇ ಸರಿಯಾದದ್ದು ಎಂದು ನಂಬಿರುವ ಸುಕ್ರಿಗೆ ಕಿತ್ತಾಡಿ ಕೋರ್ಟು ಕಚೇರಿ ಹತ್ತುವವರ ಬಗ್ಗೆ ತೀವ್ರವಾದ ಮರುಕವಿದೆ. ಮದ್ಯಪಾನದಿಂದಾಗಿ ಇಡೀ ಸಮಾಜಕ್ಕೆ ಸಮಾಜವೇ ನಾಶವಾಗುತ್ತಿದೆ ಎಂದು ಮರುಗುವ ಸುಕ್ರಿ ಮದ್ಯಪಾನ ವಿರುದ್ಧದ ಚಳುವಳಿಯಲ್ಲಿ ಮುಂಚೂಣಿ ನಾಯಕತ್ವ ವಹಿಸಿದ್ದಾಳೆ. ದಿ. ಕುಸುಮಾ ಸೊರಬ ಅವರ ಮಾರ್ಗದರ್ಶನದಲ್ಲಿ ಸಾವಿರಾರು ಹಾಲಕ್ಕಿ ಮಹಿಳೆಯರನ್ನು ಒಟ್ಟುಗೂಡಿಸಿ, ಅಂಕೋಲಾ, ಕಾರವಾರ, ಶಿರ್ಶಿ ಹಾಗೂ ಬೆಳಗಾವಿ ಜಿಲ್ಲಾಧಿಕಾರಿ ಕಚೇರಿಗಳ ಮುಂದೆ ಧರಣಿ ನಡೆಸಿದ್ದಾಳೆ. ತನ್ನ ಪ್ರಯತ್ನದಿಂದಾಗಿಯೇ ಬಡಗೇರಿ ಕೊಪ್ಪದಲ್ಲಿ ಇಂದು ಯಾವ ಗಂಡಿಗೂ ಮದ್ಯಪಾನ ಮಾಡುವ ಧೈರ್ಯ ಇಲ್ಲ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ ಸುಕ್ರಿ.

ಬಡಗೇರಿಯ ಹಾಲಕ್ಕಿ ಹೆಣ್ಣುಮಕ್ಕಳನ್ನು ಒಂದುಗೂಡಿಸಿ ಅವರಿಗೆ ಪ್ರಾಚೀನ ಕುಣಿತಗಳೆನಿಸಿದ 'ತಾರ್ಲೆ, ಪಗಡೆ, ಬಿದರಂಡೆ' ಮುಂತಾದ ಕಲೆಗಳನ್ನು ಕಲಿಸುತ್ತಿರುವ ಸುಕ್ರಿಗೆ ಅವುಗಳನ್ನು ಉಳಿಸುವ ಅಪಾರ ಆತ್ಮ ವಿಶ್ವಾಸವಿದೆ. ತನಗೆ ಬಂದ ಜಾನಪದಶ್ರೀ ಪ್ರಶಸ್ತಿ ಇಡೀ ನಮ್ಮ ಹಾಲಕ್ಕಿ ಸಮಾಜಕ್ಕೇ ಬಂದದ್ದು ಎಂದು ವಿನಯದಿಂದ ಹೇಳುತ್ತಾಳೆ. ಇಂಥ ಮಹಾನ್ ವ್ಯಕ್ತಿತ್ವದ ಬುಡಕಟ್ಟು ಕಲಾವಿದೆಯನ್ನು ಗುರುತಿಸಿ ಜಾನಪದಶ್ರೀ ಪ್ರಶಸ್ತಿ ನೀಡುವ ಮೂಲಕ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಸರ್ಕಾರ ತನ್ನನ್ನು ಗೌರವಿಸಿಕೊಂಡಿದೆ. ಆದರೆ, ಆರ್ಥಿಕವಾಗಿ ತೀರಾ ದುಸ್ಥಿತಿಯಲ್ಲಿರುವ ಹಾಲಕ್ಕಿ ಒಕ್ಕಲಿಗರ ಅಭ್ಯುದಯಕ್ಕಾಗಿ ಸರ್ಕಾರ ಏನಾದರೂ ಹೊಸ ಯೋಜನೆಗಳನ್ನು ರೂಪಿಸುತ್ತದೆ ಎಂದು ಆಶಿಸೋಣವೇ?

- 'ವಿಸ್ಮೃತಿ ಮತ್ತು ಸಂಸ್ಕೃತಿ' ಯಿಂದ

# ಹೆಣ್ಣಿನ ದೇಹವೆಂಬ ಮಾರಾಟ ವಸ್ತು

- ಡಾ. ಎಲ್. ಜಿ. ಮೀರಾ

ಮೊನ್ನೆ ಡಿಸೆಂಬರ್ 10ರಂದು, ಅಲಸೂರಿನ ಆರ್.ಬಿ.ಎ.ಎನ್.ಎಮ್.ಎಸ್. ಕಾಲೇಜಿನಲ್ಲಿ ಸಾಹಿತ್ಯ, ಸಂಸ್ಕೃತಿ ಮತ್ತು ಶಿಕ್ಷಣಗಳ ಮೇಲಿನ ಜಾಗತೀಕರಣದ ಪ್ರಭಾವವನ್ನು ಕುರಿತು ವಿಚಾರಸಂಕಿರಣವೊಂದು ಏರ್ಪಾಡಾಗಿತ್ತು. ಅದರ ಗೋಷ್ಠಿಯೊಂದಲ್ಲಿ ಡಾ|| ಎಂ. ಎಸ್. ಆಶಾದೇವಿಯವರು ಜಾಗತೀಕರಣ ಮತ್ತು ಆತಂಕಿತ ಮಹಿಳೆ ಎಂಬ ವಿಷಯದ ಬಗೆಗೆ ಉತ್ತಮವಾದ ಪ್ರಬಂಧವೊಂದನ್ನು ಮಂಡಿಸಿದರು. ಈ ಮಾರುವ, ಕೊಳ್ಳುವ ಯುಗದಲ್ಲಿ ಪ್ರವಾಸೋದ್ಯಮ ಎಂಬ 'ಹೊಸ' ಉದ್ಯಮದಲ್ಲಿ ಹೆಣ್ಣಿನ ದೇಹವು ಮಾರಲ್ಪಡುವ ಬಗೆಯನ್ನು ಅವರು ವಿವರಿಸುತ್ತಿದ್ದಾಗ ಸಭೆಯಲ್ಲಿ ಒಂದು ವಿಲಕ್ಷಣವಾದ ಮೌನ ನೆಲೆಸಿತ್ತು. ಥಾಮ್‌ಲ್ಯಾಂಡಿನ ಹದಿನಾಲ್ಕು - ಹದಿನೈದು ವರ್ಷದ ಹುಡುಗಿಯರು ಪ್ರವಾಸೋದ್ಯಮದ ಹೆಸರಿನಲ್ಲಿ ಮೈಮಾರುವ ದಂಧೆಗೆ ನೂಕಲ್ಪಟ್ಟು, ದಿನಕ್ಕೆ 20-25 ಗಂಡಸರನ್ನು ತೆಗೆದುಕೊಳ್ಳಬೇಕಾಗುತ್ತದೆ ಎಂಬ ವಾಸ್ತವಾಂಶವನ್ನು ಅವರು ಮುಂದಿಟ್ಟಾಗ ಆ ಮಧ್ಯಾಹ್ನದ ಬಿಸಿಲಲ್ಲೂ ಮೈ ತಣ್ಣಗಾದ ಅನುಭವ.

ಆಶಾದೇವಿಯವರ ಮಾತುಗಳು ಪ್ರೇಕ್ಷಕರಲ್ಲಿ ವಿಷಾದ ಮೂಡಿಸುತ್ತಿದ್ದಂತೆ ದಿನದಿನಕ್ಕೂ ಹೆಚ್ಚುತ್ತಿರುವ ವ್ಯಾಪಾರೀಕರಣದಲ್ಲಿ ಹೆಣ್ಣಿನ ದೇಹಕ್ಕೆ ದೊರಕುತ್ತಿರುವ ಹೊಸ ಹೊಸ ವ್ಯಾಖ್ಯಾನಗಳು ನೆನಪಾಗತೊಡಗಿದವು. ಅವುಗಳಲ್ಲಿ ಎರಡನ್ನು ಮುಂದಿಡಬಯಸುತ್ತೇನೆ.

ಕೆಲವು ವಾರಗಳ ಹಿಂದೆ ಜನಪ್ರಿಯ ಆಂಗ್ಲ ವಾರಪತ್ರಿಕೆಯಾದ 'ದ ವೀಕ್'ನಲ್ಲಿ ಒಂದು ಮುಖಪುಟ ಲೇಖನ ಇತ್ತು. 'ಟೆನ್ ಫನ್ ಸಿಟೀಸ್ ಫಾರ್ ದ ಟ್ರ್ಯಾವಲಿಂಗ್ ಮೇಲ್' ಎಂಬ ಲೇಖನ ಅದು. ಆ ಲೇಖನದಲ್ಲಿ ಭಾರತದ ಹತ್ತು ಮಹಾನಗರಗಳಲ್ಲಿ (ದೆಹಲಿ, ಮುಂಬಯಿ, ಕಲ್ಕತ್ತಾ, ಚಂಡೀಘರ್, ಬೆಂಗಳೂರು, ಮದ್ರಾಸು, ಪೂನಾ... ಹೀಗೆ) ಏಕಾಂಗಿಯಾಗಿ ಪ್ರವಾಸಕ್ಕೆ ಹೊರಡುವ ಗಂಡಿಗೆ ಎಂತೆಂಥ ಸುಖಸೋಪಾನಗಳು ಲಭ್ಯವಾಗುತ್ತದೆ ಎಂಬ ಮಾಹಿತಿ ಇತ್ತು. ಇಂಗ್ಲಿಷ್ ಬರುವ ವಿದ್ಯಾವಂತ ಯುವಕರು ತಮ್ಮ ಅನುಭವಗಳನ್ನು ಆಧರಿಸಿ ಬರೆದಿದ್ದ ಬರಹಗಳ ಹೊತ್ತ ಆ ಲೇಖನ. ಅಲ್ಲಿ ಖಾನಾವಳಿ ಮತ್ತು ಪಾನಶಾಲೆಗಳ ಮಾಹಿತಿ ಇದ್ದದ್ದಂತೂ ಸರಿಯೇ. ಈ ಮಾಹಿತಿಯ ಜತೆಗೆ, ಹೆಚ್ಚು ಕಡಿಮೆ ಎಲ್ಲ ಲೇಖನಗಳಲ್ಲೂ ಎಂಬಂತೆ ಆ ನಗರಗಳಲ್ಲಿ ಹೆಂಗಸರು ಹೇಗಿದ್ದರು, ಅಲ್ಲಿನ ಕ್ಲಬ್ಬುಗಳ ಲೈವ್‌ಬ್ಯಾಂಡ್‌ಗಳಲ್ಲಿ ಅರೆನಗ್ನ ಸುಂದರಿಯರು ಎಷ್ಟು ಮಾದಕವಾಗಿದ್ದರು ಎಂಬುದರ ಬಗೆಗೂ ಬಾಯಿ ಚಪ್ಪರಿಸಿಕೊಂಡು ಬರೆಯಲ್ಪಟ್ಟ ವಿವರಗಳಿದ್ದವು. ನಗರಗಳಲ್ಲಿ ಸಂಚರಿಸುವ ಹೆಂಗಸರ ಉಡುಪುಗಳು ಎಷ್ಟು ಬಿಗಿಯಾಗಿದ್ದವು, ಅವರ ಪಕ್ಕದಲ್ಲಿ ಬಲಶಾಲಿಗಳಾದ ಗಂಡಸರಿದ್ದುದರಿಂದ ತಾವು ಹೇಗೆ ಜೊಲ್ಲು ಸುರಿಸುವಷ್ಟಕ್ಕೆ ಮಾತ್ರ ತೃಪ್ತಿ ಪಟ್ಟುಕೊಳ್ಳಬೇಕಾಯಿತು. ಲೈವ್‌ಬ್ಯಾಂಡ್ ಸುಂದರಿಯರ ಮೈಯಲಿ ಎಲ್ಲೆಲ್ಲಿ ಮಚ್ಚೆಗಳಿದ್ದವು, ನಗರದ ಯಾವ ಬೀದಿಯಲ್ಲಿ ನಿಂತರೆ ಹುಡುಗಿಯರ ಮೈ ನೋಡುತ್ತಾ ಸಮಯ ಕಳೆಯಬಹುದು ಎಂಬುದರ ಬಗ್ಗೆ ಈ ವಿದ್ಯಾವಂತ! ಯುವಕರು 'ಸಹಜ'ವೆಂಬಂತೆ ಬರೆದಿದ್ದರು. ರಾಷ್ಟ್ರೀಯ ಪ್ರಸಾರವುಳ್ಳ ವಾರಪತ್ರಿಕೆಯೊಂದರಲ್ಲಿ ಪುರಷನ ಭೋಗದೃಷ್ಟಿಯನ್ನು ಹೀಗೆ ನಿರ್ಲಜ್ಜವಾಗಿ ಮೆರೆಯುವ ಲೇಖನವೊಂದು ಪ್ರಕಟವಾಗುವ ಸ್ಥಿತಿ ಇರುವುದಕ್ಕೆ ಏನು ಕಾರಣ? ಮಾರುಕಟ್ಟೆ ಸಂಸ್ಕೃತಿಯೇ ಅಥವಾ ನಮ್ಮಲ್ಲಿ ಯಾವತ್ತೂ ಇರುವ ಸ್ತ್ರೀವಿರೋಧಿ ಧೋರಣೆಯೇ? ಹೆಣ್ಣಿನ ದೇಹವನ್ನು ಹೀಗೆ 'ನೋಡುವ' ಕ್ರಮವನ್ನು ಕೇವಲ 'ಫನ್' ಎಂದು ಪಕ್ಕಕ್ಕೆ ಸರಿಸುವುದು ಸರಿಯೇ? ನಿಜ. ಇಂತಹ ಪ್ರಶ್ನೆಗಳನ್ನು ಪ್ರಧಾನವಾಹಿನಿಯ ಸಂಸ್ಕೃತಿ ಲೆಕ್ಕಕ್ಕೇ ತೆಗೆದುಕೊಳ್ಳುವುದಿಲ್ಲ. ಏಕೆಂದರೆ ಎಲ್ಲ ಭೋಗವಸ್ತುಗಳಂತೆ ಹೆಣ್ಣಿನ ದೇಹವೂ ಅದರ ಮಟ್ಟಿಗೆ ಒಂದು ಮಾರಾಟದ ವಸ್ತು ತಾನೇ. ಜನಪ್ರಿಯ ಸಿನಿಮಾಗಳು ಮತ್ತು ಜಾಹೀರಾತುಗಳು ಈ ಮನೋನೆಲೆಯನ್ನು ಪ್ರತಿಬಿಂಬಿಸುತ್ತಲೇ ಇವೆ.

ಹೆಣ್ಣನ್ನು ಕುರಿತ ಈ ಭೋಗದೃಷ್ಟಿಯನ್ನು ನಿಚ್ಚಳವಾಗಿ ವ್ಯಕ್ತಪಡಿಸಿದ ಇನ್ನೊಂದು ವಿವರ ನೆನಪಾಗುತ್ತಿದೆ. ಕನ್ನಡ ವಾರಪತ್ರಿಕೆಯೊಂದರಲ್ಲಿ ಒಂದು ಪುಟ್ಟ ಲೇಖನ ಅಚ್ಚಾಗಿತ್ತು. ಬೆಂಗಳೂರಿನ ಇಂದಿರಾನಗರದ ಕ್ಲಬ್ ಒಂದರಲ್ಲಿ ಗೋಡೆಯ ಮೇಲೆ ಹಾಕಲಾದ ಬರಹವೊಂದರ ಬಗೆಗೆ ಆ ಲೇಖನ ಬರೆಯಲ್ಪಟ್ಟಿತ್ತು. ಗೋಡೆಯ ಮೇಲಿನ ಆ ಬರಹದಲ್ಲಿ ಯಾವ ಯಾವ ವಯಸ್ಸಿನಲ್ಲಿ ಹೆಣ್ಣನ್ನು ಹೆಗೆ ಹೇಗೆ

ವಶಪಡಿಸಿಕೊಳ್ಳಬೇಕು ಎಂಬುದರ ಬಗೆಗೆ ಸಲಹೆ ನೀಡಲಾಗಿತ್ತು.

ಎಂಟು ವರ್ಷದವಳಿದ್ದಾಗ ಅವಳನ್ನು ಹಾಸಿಗೆಗೆ ಕರೆದೊಯ್ದು ಕಥೆ ಹೇಳು. ಹದಿನೆಂಟು ವರ್ಷದವಳಿದ್ದಾಗ ಅವಳನ್ನು ಕಥೆಹೇಳಿ ಹಾಸಿಗೆಗೆ ಕರೆದೊಯ್ಯಿ, ಇಪ್ಪತ್ತೆಂಟು ವರ್ಷದವಳಿದ್ದಾಗ ಅವಳನ್ನು ಕಥೆ ಹೇಳದೆ ಹಾಸಿಗೆಗೆ ಕರೆದೊಯ್ಯಿ, ಮೂವತ್ತೆಂಟು ವರ್ಷದವಳಿದ್ದಾಗ.....

ಹೀಗೆ ಹೆಣ್ಣು ಅಜ್ಜಿಯಾಗುವವರೆಗೆ ಅವಳನ್ನು ಯಾವ ಯಾವ ರೀತಿಯಲ್ಲಿ 'ಹಾಸಿಗೆಗೆ' ಕರೆದೊಯ್ಯಬೇಕು ಎಂಬುದರ ಬಗೆಗೆ ಈ ಅಮೂಲ್ಯ ಸಲಹೆಗಳು ಮುಂದುವರಿಯುತ್ತವಂತೆ. ಇಂಟರ್‌ನೆಟ್‌ನಲ್ಲೂ ಇಂತಹ ಬರಹಗಳಿಗೆ ಕೊರತೆ ಇಲ್ಲ. ತಮಾಷೆಯ ಮುಸುಕಿನಲ್ಲಿ ಇಲ್ಲಿ ಭೋಗದೃಷ್ಟಿ ತನ್ನ ಕೋರೆಹಲ್ಲನ್ನು ತೋರಿಸುತ್ತಿರುವುದು ನಿಚ್ಚಳವಾಗಿದೆಯಲ್ಲವೇ? 'ಸಭ್ಯ' ಸಮಾಜದ ಕ್ಲಬ್ ಒಂದರ ಗೋಡೆಯ ಮೇಲೆ ಇಂತಹ ಬರಹಗಳು ಇರುತ್ತವೆ ಅಂದರೆ ನಮ್ಮ ಸಭ್ಯತೆಯ ವ್ಯಾಖ್ಯಾನಗಳನ್ನೇ ಬದಲಾಯಿಸಿ ಕೊಳ್ಳಬೇಕೋ ಹ್ಯಾಗೆ?

* * *

ಹೀಗೆ ವಿಚಾರಸಂಕಿರಣದ ಪ್ರಬಂಧವೊಂದು ಅನುಭವದ ಸುರುಳಿಯನ್ನು ಬಿಚ್ಚಿಟ್ಟಿತು. ನಮ್ಮ ಮಾಧ್ಯಮಗಳಲ್ಲಿ, ಗೋಡೆ ಮೇಲಿನ ಬರಹಗಳಲ್ಲಿ, ಮಾತುಗಳಲ್ಲಿ, ಬಯ್ಗುಳಗಳಲ್ಲಿ ಕೊನೆಗೆ ಯೋಚಿಸುವ ರೀತಿಯಲ್ಲೇ, ಸ್ತ್ರೀವಿರೋಧಿ (ಭೋಗ)ದೃಷ್ಟಿ ಸೇರಿಕೊಂಡುಬಿಟ್ಟಿದೆಯೇನೋ ಅನ್ನಿಸುತ್ತದೆ. ಸಭ್ಯತೆಯ ಮುಖವಾಡವನ್ನು ಸೀಳಿಕೊಂಡು ಬರುವ ಅದರ ಹಲ್ಲು ಉಗುರುಗಳು ನಮ್ಮ ಆತ್ಮವನ್ನು ಕಚ್ಚುತ್ತಾ, ಪರಚುತ್ತಾ ಇರುತ್ತವೆ. ಮಾರುಕಟ್ಟೆ ಸಂಸ್ಕೃತಿಯ ರುದ್ರನರ್ತನದ ಎದುರು ಇಂತಹ ನೋವುಗಳು ಗಣನೆಗೆ ಬರುತ್ತವೆಯೇ? ವಿದ್ವಾಂಸರೊಬ್ಬರ ಮಾತು ನೆನಪಾಗುತ್ತಿದೆ.

**"ಪ್ರಪಂಚವೊಂದು ಮಾರುಕಟ್ಟೆ<br>ನಾವೆಲ್ಲಾ ಗ್ರಾಹಕರು"**

ಬಹುಶಃ ಇದಕ್ಕೊಂದು ತಿದ್ದುಪಡಿ ಮಾಡಬೇಕು.

**ನಾವು ಗಂಡಸರೆಲ್ಲಾ ಗ್ರಾಹಕರು,<br>ಹೆಂಗಸರು ಸರಕುಗಳು**

## ಅವಳ ದಿನಚರಿ

ಬಸ್‌ಸ್ಟ್ಯಾಂಡ್ ಪಕ್ಕದ ಬಟ್ಟೆಯಂಗಡಿ<br>
ಯ ಸೇಲ್ಸ್‌ಗರ್ಲ್

ಹರವುತ್ತಾಳೆ ಗಿರಾಕಿಗಳೆದುರು<br>
ಹ್ಯಾಂಗರ್‌ನಿಂದ<br>
ನಮೂನೆವಾರು ಬಟ್ಟೆಗಳ<br>
ದಿನಕ್ಕೆ ನೂರೆಂಟು ಬಾರಿ

ಕಲರ್ ಗ್ಯಾರಂಟಿ ಅನ್ನುತ್ತಾಳೆ<br>
ಸ್ಟಿಚ್ಚೇ ಬಿಡೋಲ್ಲ ಅನ್ನುತ್ತಾಳೆ<br>
ಸೂಪರ್ ಕ್ವಾಲಿಟಿ ಅಪರೂಪದ ಪ್ಯಾಟರ್ನ್<br>
ಮತ್ತೆ ಬರುವುದು ಖಾತ್ರಿಯಿಲ್ಲ ಅನ್ನುತ್ತಾಳೆ<br>
ಬಟ್ಟೆಯ ಗುಡ್ಡೆ ಹಾಕುತ್ತಾಳೆ<br>
ಸೇಲ್ಸ್ ಚಾತುರ್ಯ ಮೆರೆಯುತ್ತಾಳೆ<br>
ನಗೆಯಲಿ ಮನಸು ಕದಿಯುತ್ತಾಳೆ

ಕೊಂಡು ಕೊಂಡವರಿಗೆ ಕೃತಜ್ಞತೆಯ<br>
ಡಬ್ಬಲ್ ಬೋನಸ್ ಈಯುತ್ತಾಳೆ<br>
ಮರೆಯದೆ ಮರು ಆಹ್ವಾನ ಕೊಡುತ್ತಾಳೆ<br>
ಬಿಟ್ಟು ಹೋದವರಿಗೆ<br>
ಪಕ್ಕದ ಶಾಪಿನ ವಿವರ ನೀಡುತ್ತಾಳೆ<br>
ರಾಶಿ ಬಟ್ಟೆಗಳ ಬಲು ನಾಜೂಕಾಗಿ<br>
ಮಡಚುತ್ತಾಳೆ

ತಮ್ಮನ ಫೀಜು ತಂಗಿಯ ಓದು<br>
ಅಮ್ಮನ ಕಾಯಿಲೆ ಅಪ್ಪನ ಜೂಜು<br>
ಮಾಸಲು ಬಣ್ಣವ ಪೋಣಿಸುತ್ತಾಳೆ<br>
ತಿಂಗಳ ಸಂಬಳದೊಳಗೆ<br>
ಕನಸಿನ ಹ್ಯಾಂಗರಿನೊಳಗೆ

**- ಪ್ರಮೀಳ ಚೊಕ್ಕಾಡಿ**

# ಬನ್ನಿ ಸಾಧನೆಯ ರಂಗಕ್ಕೆ...

**- ನೇಮಿಚಂದ್ರ**

ನಾನು ಶಾಲೆ ಓದಿದ ಕಾಲದಲ್ಲಿ ನನ್ನೆದುರು ಸ್ಫೂರ್ತಿ ನೀಡುವಂತಹ ಮಹಿಳಾ ಮಾದರಿಗಳಿರಲಿಲ್ಲ. ಶಾಲೆಯಲ್ಲಿ ನಾನು ಓದಿದ ಯಾವ ಪುಸ್ತಕದಲ್ಲೂ ಮಹಿಳಾ ಸಾಧಕಿಯರ ಉಲ್ಲೇಖವಿರಲಿಲ್ಲ. ಸುಮಾರು 25 ವರ್ಷಗಳ ಹಿಂದೆ, ಪಿ.ಯು.ಸಿ. ಮುಗಿಸಿ ಇಂಜಿನಿಯರಿಂಗ್ ರಂಗವನ್ನು ಪ್ರವೇಶಿಸುವಾಗ ನನ್ನಲ್ಲಿ ಸಾಕಷ್ಟು ಅಳುಕು ಆತಂಕವಿತ್ತು. ನನ್ನೆದುರು ಉದಾಹರಣೆಗಳಿರಲಿಲ್ಲ. 'ಇದೆಲ್ಲ ಹೆಂಗಸರ ರಂಗವಲ್ಲ, ಕಾರ್ಪೆಂಟ್ರಿ ಇರುತ್ತೆ, ಫೌಂಡ್ರಿ ಇರುತ್ತೆ, ಮಷೀನ್ ಶಾಪ್ ಇರುತ್ತೆ' ಎಂದೆಲ್ಲ ಹೆದರಿಸಿದವರಿದ್ದರು. ಅಳುಕುತ್ತಾ ಒಳಹೊಕ್ಕ ನಾನು ಮತ್ತು ನನ್ನ ಗೆಳತಿ ವಿಶ್ವವಿದ್ಯಾಲಯಕ್ಕೆ ರ‍್ಯಾಂಕ್ ಪಡೆದು ಹೊರಬಂದಾಗಲೆ, ಅಲ್ಲಿ ಹೆಣ್ಣು ಮಕ್ಕಳಿಗೆ ಅಸಾಧ್ಯವಾದದ್ದು ಏನೂ ಇಲ್ಲವೆಂದು ತಿಳಿದದ್ದು!

ಈ ಎರಡೂವರೆ ದಶಕಗಳಲ್ಲಿ ಜಗತ್ತು ಬಹಳಷ್ಟು ಬದಲಾಗಿದೆ. ಆದರೆ ಇಂದಿಗೂ ಹೆಣ್ಣುಮಕ್ಕಳ ಎದುರು ನಮ್ಮ ಪತ್ರಿಕೆಗಳು, ಮಾಧ್ಯಮಗಳು ಇಡುತ್ತಿರುವ ಮಾದರಿಗಳನ್ನು ನೋಡಿದರೆ ವಿಷಾದವಾಗುತ್ತದೆ.

ಮಾಧ್ಯಮಗಳು ಸದಾ ಬಿತ್ತರಿಸುವ ರೋಲ್ ಮಾಡಲ್ಸ್ ಯಾವುವು? ಸುಶ್ಮಿತಾ ಸೇನ್, ಐಶ್ವರ್ಯ ರೈ, ಯುಕ್ತಾ ಮುಖಿ ಇವರೇ ಸ್ತ್ರೀ ಮಾದರಿಗಳೆಂಬಂತೆ ಸತತವಾಗಿ ಬಿತ್ತರಿಸುವುದನ್ನು ನೋಡುತ್ತೇವೆ. ಇವರು ಕೇವಲ ಮಾಧ್ಯಮಗಳು, ಕೊಳ್ಳುಬಾಕ ಸಂಸ್ಕೃತಿ ರೂಪಿಸಿರುವ ರೋಲ್ ಮಾಡೆಲ್ಸ್ ಅಷ್ಟೆ. ಇವೇ ಮಾಧ್ಯಮಗಳು ವಿಜ್ಞಾನ, ಸಾಹಿತ್ಯ, ಕಲೆ, ವೈಮಾನಿಕ, ಸೇನೆ, ಇಂತಹ ಹತ್ತು ಹಲವು ರಂಗಗಳಲ್ಲಿ ಹೆಣ್ಣಿನ ಸಾಧನೆಯನ್ನು ಇಷ್ಟು ಪರಿಯಲ್ಲಿ ಬಿಂಬಿಸಿ ಬಿತ್ತರಿಸುವುದಿಲ್ಲ. ಹಾಡಿ ಹೊಗಳುವುದಿಲ್ಲ, ಕಾರಣ, ಹೆಣ್ಣಿನ ನಿಜವಾದ ಸಾಧನೆಯನ್ನು ಪ್ರಾಯೋಜಿಸುವ ಕಂಪನಿಗಳೆಲ್ಲಿವೆ? ನಾವು ಸಂಭ್ರಮಿಸಬೇಕಾದದ್ದು ಸೌಂದರ್ಯ ರಾಣಿಯರು ಕಿರೀಟ ತೊಟ್ಟಾಗಲಲ್ಲ, ಕಿರಣ್ ಬೇಡಿ, ಅರುಣಾ ರಾಯ್ ಮ್ಯಾಗ್ಸೆಸೇ ಪಡೆದಾಗ, ನಿವೇದಿತಾ ಬಾಸಿನ್ ವಿಶ್ವದ ಅತಿ ಚಿಕ್ಕ ವಯಸ್ಸಿನ ಕ್ಯಾಪ್ಟನ್ ಆಗಿ ಜೆಟ್ ವಿಮಾನವನ್ನು ಹಾರಿಸಿದಾಗ, ಬಚೇಂದ್ರಿ ಪಾಲ್ ಹಿಮಾಲಯ ಏರಿದಾಗ. ಆದರೆ ಇವರಾರೂ ಮುಖಪುಟಗಳ ವರ್ಣರಂಜಿತ ಸುದ್ದಿಯಾಗುವುದಿಲ, ಮತ್ತೆ ಮತ್ತೆ ಬರೆವ ಲೇಖನಗಳಿಗೆ ವಸ್ತುವಾಗುವುದಿಲ್ಲ. ಮತ್ತೊಮ್ಮೆ ಹೆಣ್ಣು, ಕೇವಲ ಅಲಂಕಾರಿಕ ವಸ್ತುವಾಗಿ ಉಳಿಯುವ ಅಪಾಯವಿದೆ. ನಮ್ಮೆಲ್ಲ ಸಾಮರ್ಥ್ಯವನ್ನು ಮರೆತು, ಬದುಕು ತೆರೆದ ಸಾಧ್ಯತೆಗಳನ್ನೆಲ್ಲ ತೊರೆದು, 'ಇವಿಷ್ಟೆ ಸ್ತ್ರೀಯ ಜಗತ್ತು' ಎಂದು ಸೀಮಿತ ವರ್ತುಲದಲ್ಲಿ ಸುತ್ತುವ ಆತಂಕವಿದೆ.

ಪತ್ರಿಕೆಗಳಲ್ಲಿ ಬಿತ್ತರವಾಗುವುದು ಗ್ಲಾಮರ್ ಜಗತ್ತು, ಸೌಂದರ್ಯ ರಾಣಿಯರು. ಕಾರಣ 'ಪತ್ರಿಕೆ ಹೆಚ್ಚು ಮಾರಾಟವಾಗುತ್ತದೆ' ಎಂಬ ನಂಬುಗೆ ಮತ್ತು ಇಂತಹ ಲೇಖನಗಳನ್ನು ಬರೆಯಲು ಹೆಚ್ಚು ಶ್ರಮ ಬೇಡ, ಸಂಶೋಧನೆ ಬೇಡ. ಇಂತಹ ಲೇಖನಗಳನ್ನು ಪತ್ರಿಕೆಗಳನ್ನು ಪ್ರಾಯೋಜಿಸಲು ದೊಡ್ಡ ದೊಡ್ಡ ಕಂಪನಿಗಳಿವೆ. ಒಂದು ಕಾಲಕ್ಕೆ ನಾನು 'ಫೆಮಿನಾ', 'ಸಾವಿ' ಮುಂತಾದ ಮಹಿಳಾ ಪತ್ರಿಕೆಗಳನ್ನು ಕೊಂಡು ಓದುತ್ತಿದೆ. 'ಸಾವಿ' ಪತ್ರಿಕೆಯಲ್ಲಿ ಕಿರಣ್ ಬೇಡಿ, ಭಾಂವ್ರಿ ದೇವಿ, ಡಾ। ಇಂದಿರಾ ಅಹುಜಾ ಮುಂತಾದ ಧೀಮಂತ ಮಹಿಳೆಯರು ಮುಖಪುಟದಲ್ಲಿ ಹಾಕುತ್ತಿದ್ದ ಕಾಲವೊಂದಿತ್ತು. ಈ ಮಹಿಳಾ ಪತ್ರಿಕೆಗಳಲ್ಲಿ ಮಹಿಳೆಯರ ಬಗ್ಗೆ ಓದಲು ಬಹಳಷ್ಟು ವಿಷಯಗಳು ಸಿಗುತ್ತಿತ್ತು. ಇಂದು ಈ ಎಲ್ಲ ಪತ್ರಿಕೆಗಳ ತುಂಬಾ ಬರೀ 'ಕೊಳ್ಳುಬಾಕ' ಒತ್ತಾಯಗಳು. ರೂಪದರ್ಶಿಯರು, ಸೌಂದರ್ಯ ರಾಣಿಯರು, ಫ್ಯಾಷನ್ ಪುಟಗಳು, ನೂರೆಂಟು ವಿಧದ ಉಡುಪು ವಿನ್ಯಾಸ, ಸೌಂದರ್ಯ ಸಾಧನಗಳು, ಶೂಗಳು, ಚಪ್ಪಲಿಗಳು, ವ್ಯಾನಿಟಿ ಬ್ಯಾಗ್‌ಗಳು, ಬಳೆ, ಸರ, ಚಿನ್ನ, ಒಡವೆ, ವಜ್ರ, ವೈಢೂರ್ಯ... ಕೊಳ್ಳಿ ಕೊಳ್ಳಿ ಎನ್ನುವ ಪುಟಗಳೇ ಪತ್ರಿಕೆಯ ತುಂಬ ತುಂಬಿ ತುಳುಕಿವೆ. ಇವುಗಳ ನಡುವೆ ಅಲ್ಲೊಂದು ಇಲ್ಲೊಂದು ಪ್ರಕಟವಾದ ಲೇಖನಗಳನ್ನು, ಹುಲ್ಲುಮೆದೆಯಲ್ಲಿ ಸೂಜಿಯಂತೆ ಹುಡುಕಿ ಓದಬೇಕು. ಇಂದು 'ಸಾವಿ' ಪತ್ರಿಕೆಯ ಮುಖಪುಟದಲ್ಲಿ ಬರುವವರು ರೂಪದರ್ಶಿಗಳು, ಮಾಜಿ ಸೌಂದರ್ಯ ರಾಣಿಯರು, ಟಿವಿ ಚಾನೆಲ್‌ಗಳ 'ಆಂಕರ್'ಗಳು, ಸಿನಿಮಾಗಳಲ್ಲಿ ಸುದ್ದಿ ಮಾಡಿದವರು, ಇಂತಹವರೇ. ಹೆಚ್ಚು ಅಗತ್ಯವಿಲ್ಲದ್ದನ್ನು, ಅನಿವಾರ್ಯವೆಂಬಂತೆ ಬಿತ್ತರಿಸುವ ಕಂಪನಿಗಳ ಬೆಂಬಲದಲ್ಲಿ ಪ್ರಕಟವಾಗುವ ಲೇಖನಗಳನ್ನು ಓದಿ, ಪ್ರಸಾರವಾಗುವ ಕಾರ್ಯಕ್ರಮಗಳನ್ನು ನೋಡಿ, ಹಣವಿದ್ದವರು ಮಾತ್ರವಲ್ಲ ಹಣವಿಲ್ಲದ ಹೆಣ್ಣು ಮಕ್ಕಳೂ ಮರುಳಾಗಿ ತಮ್ಮ ಬದುಕಿನ ಅನಂತ ಅವಕಾಶಗಳನ್ನು ಕಳೆದುಕೊಳ್ಳುತ್ತಿದ್ದಾರೆ. ತಮ್ಮ ಹಣ, ಸಮಯ, ಸಾಮರ್ಥ್ಯವನ್ನೆಲ್ಲ ಅನಗತ್ಯ ದಿಕ್ಕಿನಲ್ಲಿ ಹರಿಯಬಿಡುತ್ತಿದ್ದಾರೆ.

ಒಂದೆರಡು ವರ್ಷಗಳ ಹಿಂದೆ, ನನ್ನನ್ನು ಮತ್ತು ಪ್ರಸಿದ್ಧ ಮನಃಶಾಸ್ತ್ರದ ಪ್ರೊಫೆಸರ್ ಅವರನ್ನು ಬೆಂಗಳೂರಿನ ಒಂದು

ಹೆಣ್ಣು ಮಕ್ಕಳ ಕಾಲೇಜಿಗೆ ಮುಖ್ಯ ಅತಿಥಿಯಾಗಿ ಆಹ್ವಾನಿಸಿದ್ದರು. ನಮ್ಮೊಡನೆ, ಓರ್ವ ದೂರದರ್ಶನದ ನಟಿಯೊಬ್ಬರನ್ನು ಕೂಡಾ ಅಂದು ಆಹ್ವಾನಿಸಿದ್ದರು. ವೇದಿಕೆಯ ಮೇಲೆ ನಾನು ಮತ್ತು ಪ್ರೊಫೆಸರ್ ಕುಳಿತಿದ್ದೇವೆ. ಟಿವಿ ತಾರೆಯ ಪತ್ತೆಯಿಲ್ಲ. ದೊಡ್ಡ ಹಾಲಿನ ತುಂಬಾ ಹೆಣ್ಣು ಮಕ್ಕಳ ಸಡಗರ. ಅವರನ್ನು ಸೂಕ್ಷ್ಮವಾಗಿ ಗಮನಿಸಿದೆ. ಅಲ್ಲಿ ಕೆಳ ಮಧ್ಯಮ ವರ್ಗದಿಂದ ಬಂದ ಹೆಣ್ಣು ಮಕ್ಕಳೇ ಹೆಚ್ಚು ಕಂಡರು. ಅವರು ಹಾಕಿದ ಬಟ್ಟೆಗಳು, ಮಾಡಿಕೊಂಡ ಅಲಂಕಾರ ಅವರ 'ಕೈಮೀರಿದ್ದಾಗಿತ್ತು' ಎಂದು ಕೂಡಾ ಏಕೋ ಅನಿಸುತ್ತಿತ್ತು. ತಾವು ಕಂಡ ಗ್ಲಾಮರ್ ಜಗತ್ತಿನ ಪ್ರಭಾವ, ಅನುಕರಣೆ ದಟ್ಟವಾಗಿ ವಾತಾವರಣದಲ್ಲಿ ತುಂಬಿತ್ತು. ಸರಿ ಸಾಕಷ್ಟು ತಡವಾಗಿಯೇ ಟಿವಿ ತಾರೆ ಆಗಮಿಸಿದ್ದರು, ಕೈಯಲ್ಲಿ ಮೊಬೈಲ್ ಹಿಡಿದು (ಆಗಿನ್ನೂ ಮೊಬೈಲ್ ಸಾಕಷ್ಟು ಅಪರೂಪದ ಸಲಕರಣೆಯಾಗಿತ್ತು) ಗಡಿಬಿಡಿಯಿಂದ ಆಗಮಿಸಿ, ತಾನು ಬಹಳ 'ಬಿಜಿ' ಇರುವುದಾಗಿ, ಸಮಯವಿಲ್ಲವೆಂದೂ, ಬೇಗ ಮುಗಿಸಿ ಶೂಟಿಂಗ್‌ಗೆ ಓಡಬೇಕೆಂದು ಕಾತರಿಸಿದರು. ಆಕೆ ಬಂದೊಡನೆ ಇಡೀ ಹಾಲ್ ಸಂಭ್ರಮದಿಂದ ಸ್ವಾಗತಿಸಿತು. ಸರಿ ಪ್ರೊಫೆಸರ್ ಅವರು ಮಾತನಾಡತೊಡಗಿದರು. ಬಲು ದೊಡ್ಡ ವಿಚಾರವಂತರಾದ, ಅಷ್ಟೇ ಉತ್ತಮ ವಾಗ್ಮಿಯಾದ ಅವರು ಮಾತನಾಡುತ್ತಿದ್ದರೆ, ಇಡೀ ಹಾಲಿನಲ್ಲಿ ಗದ್ದಲವೋ ಗದ್ದಲ. ಅವರ ಮಾತನ್ನು ಕೇಳಿದವರೇ ಇಲ್ಲ, ನನಗಂತೂ ರೇಗಿ ಹೋಯಿತು. ಸಾಧಕ ಮಹಿಳೆಯರ ಬಗ್ಗೆ ಹೆಣ್ಣು ಮಕ್ಕಳಿಗೆ ತಿಳಿಸಬೇಕು ಎಂದು ತಯಾರಾಗಿ ಹೋಗಿದ್ದ ನನಗೆ, ಇಂತಹ ವಾತಾವರಣದಲ್ಲಿ, ಅವರ ಸದ್ಯದ ಮನಃಸ್ಥಿತಿಯಲ್ಲಿ ನಾನು ಆಡುವ ಮಾತುಗಳೆಲ್ಲ 'ಗೋರ್ಕಲ್ಲ ಮೇಲೆ ಮಳೆ ಸುರಿದಂತೆ' ಎಂದು ಅರಿವಾಯಿತು. ಎರಡೇ ನಿಮಿಷಕ್ಕೆ ಮಾತು ಮುಗಿಸಿ ಬಂದು ಕುಳಿತೆ. ಇದೀಗ ನಟೀಮಣಿ ಮಾತನಾಡಲು ಎದ್ದು ನಿಂತರು. ಅದೆಂತಹ ಮಗ್ನತೆಯಿಂದ ಹುಡುಗಿಯರು ಕೇಳಿದರು. ಆಕೆ ಹೇಳಿದ್ದು ಏನೂ ಇರಲಿಲ್ಲ, ಮಧ್ಯೆ ಮೊಬೈಲ್ ರಿಂಗ್ ಆಯಿತು. ತಾನೆಷ್ಟು 'ಬಿಜಿ' ಅನ್ನುವುದಕ್ಕೆ ಮತ್ತಷ್ಟು ಪುರಾವೆ ಸಿಕ್ಕು ಆಕೆ ಸಂಭ್ರಮಿಸಿದಂತೆ ಕಂಡಿತು. ಅಂತೂ ಆಕೆಯ ಎರಡು ಮಾತುಗಳು ಮುಗಿಯಿತು. ದಡಬಡಿಸಿ ಕೆಳಗಿಳಿದು ಬಂದವರೆ, ತಾನು ಹೋಗಬೇಕೆಂದು ಅವಸರಿಸಿದರು. ವ್ಯವಸ್ಥಾಪಕರು ಆಟೋಗಾಗಿ ಪರದಾಡಿದರು. ತಕ್ಷಣ ಸಿಗದಿದ್ದಾಗ, ವಿಪರೀತ ಚಡಪಡಿಸಿ ಅಂತೂ ಮುಂದಿನ ನಾಲ್ಕೈದು ನಿಮಿಷಗಳಲ್ಲಿ ವ್ಯವಸ್ಥಾಪಕರು ಹೇಗೋ ಒಂದು ಆಟೋ ತಂದು, ಆಕೆಯನ್ನು ಸಾಗಹಾಕಿ ನಿಟ್ಟುಸಿರುಬಿಟ್ಟರು.

ಇದೀಗ ನಾನು ಕುಳಿತಿದ್ದೆ , ಮಕ್ಕಳ 'ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ನೋಡಬೇಕೆ, ಹೋಗಬೇಕೆ' ಎಂದು ಯೋಚಿಸುತ್ತಿದ್ದೆ. ಅಲ್ಲಿಯ ಪ್ರಾಧ್ಯಾಪಕಿಯೊಬ್ಬರು, 'ಇಂಥಾ ಸಿನಿಮಾದ ಹಾಡಿಗೆ ಹೆಣ್ಣು ಮಕ್ಕಳು ನೃತ್ಯ ಮಾಡುತ್ತಾರೆ, ನೀವು ಖಂಡಿತಾ ನೋಡಬೇಕು, ಎಂದರು. ತಟ್ಟನೆ ಎದ್ದು ನಿಂತೆ, ಸಿನಿಮಾ ಹಾಡಿನ ಕುಣಿತ ನೋಡಲು ನನ್ನ ಸಮಯ ವ್ಯರ್ಥ ಮಾಡಬೇಕಿರಲಿಲ್ಲ. ಹೊರಟು ಬಂದೆ. ಅನೇಕ ದಿನಗಳ ತನಕ ಈ ಘಟನೆ ನನ್ನನ್ನು ಕಾಡಿತು. ನಮ್ಮ ಜಾಹಿರಾತು ಸಂಸ್ಕೃತಿ, ಗ್ಲಾಮರ್ ಜಗತ್ತು ನಮ್ಮ ಮಕ್ಕಳ ಮೇಲೆ ಅದೆಷ್ಟು ಗಾಢ ಪ್ರಭಾವ ಬೀರುತ್ತಿದೆ ಎಂದು ಮನಸ್ಸು ಮುದುಡಿತು. ಅಲ್ಲಿದ್ದ ಎಲ್ಲ ಹೆಣ್ಣು ಮಕ್ಕಳು ಸುಷ್ಮಿತಾ ಸೇನ್, ಐಶ್ವರ್ಯ್ ರೈ ಆಗಲು ಸಾಧ್ಯವಿರಲಿಲ್ಲ, ಆದರೆ ಅಲ್ಲಿದ್ದ ಒಬ್ಬೊಬ್ಬರೂ ಮೇರಿ ಕ್ಯೂರಿ ಆಗಬಹುದಿತ್ತು, ನಿವೇದಿತಾ ಬಾಸಿನ್ ಆಗಬಹುದಿತ್ತು, ಬಚೇಂದ್ರಿ ಪಾಲರಾಗಬಹುದಿತ್ತು, ಸಾಲುಮರದ ತಿಮ್ಮಕ್ಕನಾಗಬಹುದಿತ್ತು, ಅರುಣ್ ರಾಯ್ ಆಗಬಹುದಿತ್ತು, ಕಿರಣ್ ಬೇಡಿ ಆಗಬಹುದಿತ್ತು. ಬದುಕು ತೆರೆದ ನೂರು ಹಾದಿಗಳನ್ನು, ನೂರು ಬಾಗಿಲುಗಳನ್ನು, ನೂರು ಸಾಧ್ಯತೆಗಳನ್ನು ಬದಿಗೊತ್ತಿ ಈ ಹೆಣ್ಣು ಮಕ್ಕಳು ಹೊರಟಿದ್ದರು ಜಾಹಿರಾತುಗಳ ಕಿಂದರಿಜೋಗಿಯ ಹಿಂದೆ, ಕಿನ್ನರ ಲೋಕದ ಕನಸು ಹೊತ್ತು.

ಇಂದು ನನಗೆ ನಮ್ಮ ಹೆಣ್ಣು ಮಕ್ಕಳ ಮುಂದೆ 'ರೋಲ್ ಮಾಡೆಲ್' ಇಡುವುದು ಹಿಂದಿಗಿಂತ ಹೆಚ್ಚು ಅಗತ್ಯ ಎನಿಸುತ್ತದೆ. ನನ್ನ ಶಾಲಾ ದಿನಗಳಲ್ಲಿ, ನಮ್ಮೆದುರು ಮಾದರಿಗಳಿರಲಿಲ್ಲ ನಿಜ, ಆದರೆ ಈ ಬಗೆಯ ಗ್ಲಾಮರ್ ಜಗತ್ತನ್ನು, ತುಂಬಾ ನೋವಿನ ವಿಷಯವೆಂದರೆ, ಗಂಭೀರ ಪತ್ರಿಕೆಗಳು ಕೂಡಾ, ಇವೇ ಹಾದಿಯನ್ನು ಹಿಡಿದಿವೆ. ಸುದ್ದಿ ಮಾಡುವುದು, ಹೆಚ್ಚು ಮಾರಾಟ ಮಾಡುವುದೇ ಮೂಲ ಮಂತ್ರವಾಗಿದೆ. ಬೆಂಗಳೂರಿಗೆ ಇದೇ ವರ್ಷ ಜೇನ್ ಗುಡಾಲ್ ಬಂದಾಗ, ನಾನಂದುಕೊಂಡಿದ್ದೆ ಪ್ರತಿಯೊಂದು ಪತ್ರಿಕೆಯಲ್ಲಿ ಆಕೆ ಮುಖಪುಟದಲ್ಲಿ ರಾರಾಜಿಸುತ್ತಾರೆ ಎಂದು. ಜೇನ್ ಗುಡಾಲ್ ಅದ್ಭುತದ ವಿಜ್ಞಾನಿ. ತನ್ನ 23ನೇ ವಯಸ್ಸಿಗೇ ಕೆನ್ಯಾಗೆ ಹೋದ ಈಕೆ ಚಿಂಪಾಂಜಿಗಳನ್ನು ಅವುಗಳ ಸಹಜ ವಾಸಸ್ಥಾನದಲ್ಲಿ ಅತಿ ನಿಕಟವಾಗಿ ಅಧ್ಯಯನ ಮಾಡಿದವರು. ನಾಲ್ಕು ದಶಕಗಳನ್ನು ವಿಸ್ತರಿಸಿದೆ ಇವರ ಸಂಶೋಧನೆ. ಚಿಂಪಾಂಜಿಗಳನ್ನು ಕುರಿತ ಈಕೆಯ ಅಧ್ಯಯನ, ಅತ್ಯಂತ ಮುಖ್ಯ ವೈಜ್ಞಾನಿಕ ಅನ್ವೇಷಣೆಗಳಿಗೆ ಕಾರಣವಾಯಿತು. ಇಂದು ಆಕೆ ಕೇವಲ ವಿಜ್ಞಾನಿಯಾಗಿ ಅಲ್ಲ, ಶಾಂತಿದೂತಳಾಗಿ ಕೂಡಾ ಜಗತ್ ಪ್ರಸಿದ್ಧರಾದವರು. ಇಂತಹ ವ್ಯಕ್ತಿ ಮೊದಲ ಬಾರಿಗೆ ಭಾರತಕ್ಕೆ, ಅದರಲ್ಲೂ ಬೆಂಗಳೂರಿಗೆ ಬಂದಾಗ, ನಮ್ಮ ಕನ್ನಡ ಪತ್ರಿಕೆಗಳ ಮುಖಪುಟದಲ್ಲಿ ರಾರಾಜಿಸುತ್ತಾರೆ ಎಂದುಕೊಂಡಿದ್ದೆ. ಆದರೆ

ಆಕೆ ಯಾವುದೇ ಕನ್ನಡ ಪತ್ರಿಕೆಯ ಮುಖಪುಟದಲ್ಲಿ ಕಾಣಿಸಿಕೊಳ್ಳಲಿಲ್ಲ, ಒಳಪುಟದಲ್ಲಿ ಬಂದದ್ದೂ ಅಪರೂಪವೆ. ಆಕೆ ಬೆಂಗಳೂರಿಗೆ ಬಂದ ದಿನ, ಅಪಘಾತದಲ್ಲಿ ಕಾಲಿಗೆ ಒಂದಿಷ್ಟು ಪೆಟ್ಟು ಮಾಡಿಕೊಂಡಿದ್ದರೂ, ಕುಂಟುಗಾಲಿನಲ್ಲಿ ಆಕೆ ಭಾಷಣ ಮಾಡುವಲ್ಲಿಗೆ ಓಡಿದೆ. ಈ ಸರಳ ವಿಜ್ಞಾನಿ, ನನ್ನೊಡನೆ ಅಲ್ಲಿಯೇ ಮೆಟ್ಟಿಲ ಮೇಲೆ ಕುಳಿತು ಸಂದರ್ಶನ ನೀಡಿದರು. ಅತ್ಯಂತ ಉತ್ಸಾಹದಿಂದ ಪತ್ರಿಕೆಗೆ ಕಳುಹಿಸಿದೆ, ಪ್ರಕಟಿಸಿದರು. ಆದರೆ ಜೇನ್ ಗುಡಾಲ್ ಲೇಖನ ಒಳ ಪುಟಗಳ ಆಳದಲ್ಲೆಲ್ಲೋ ಪ್ರಕಟವಾಗಿತ್ತು, ಮುಖಪುಟದಲ್ಲಿ ಟಿವಿ ರೂಪದರ್ಶಿಯರಿದ್ದರು ! ನಿಜ ಕಲ್ಪನಾ ಚಾವಲಾ ಎಲ್ಲ ಪತ್ರಿಕೆಗಳ ಮುಖಪುಟಗಳಲ್ಲಿ ರಾರಾಜಿಸಿದರು, ಆದರೆ ಆಕೆ ಮುಖಪುಟದಲ್ಲಿ ಬಂದದ್ದು ಆಕೆ ಅತ್ಯಂತ ರೋಚಕ ರೀತಿಯಲ್ಲಿ ಅಂತರಿಕ್ಷದಲ್ಲಿ ಸತ್ತಾಗ. ಕಲ್ಪನಾ ಮೊದಲ ಬಾರಿಗೆ ಅಂತರಿಕ್ಷಕ್ಕೆ ಹಾರಿದ ಸಮಯದಲ್ಲಿ, ಆಕೆಯ ಬಗ್ಗೆ ಮುಖಪುಟದ ಲೇಖನವಿರಲಿ, ಒಳಗಿನ ಪುಟಗಳಲ್ಲಿ ಲೇಖನಗಳು ಪ್ರಕಟವಾದದ್ದೂ ಅಪರೂಪವಿತ್ತು.

★ ★

ನಾವು ಬದುಕಿನಲ್ಲಿ ಆಯ್ದುಕೊಳ್ಳುವ 'ಮಾದರಿ'ಗಳು ನಮ್ಮ ಬದುಕಿನ ಮೇಲೆ ಎಷ್ಟೊಂದು ಪ್ರಭಾವ ಬೀರಬಲ್ಲದು ಎಂದು ಯೋಚಿಸುವಾಗ, ಅಚ್ಚರಿಯಾಗುತ್ತದೆ. ನಮ್ಮಮ್ಮ ಅಪ್ಪಟ ಅನಕ್ಷರಸ್ತೆ. ನನ್ನ ತಂದೆ ಕನ್ನಡದ ಪ್ರಾಧ್ಯಾಪಕರಾಗಿದ್ದರು. ನಾನು ಹತ್ತನೇ ತರಗತಿಯಲ್ಲಿದ್ದ ಸಮಯದಲ್ಲಿ, ನಮ್ಮ ತಂದೆಯವರ ಸಾವಿರ ಸಾವಿರ ಪುಸ್ತಕಗಳ ಸಂಗ್ರಹದಲ್ಲಿ ನನಗೆ ಮೇರಿ ಕ್ಯೂರಿಯನ್ನು ಕುರಿತು ಒಂದು ಪುಟ್ಟ ಪುಸ್ತಕ ಸಿಕ್ಕಿತು. ಆಕೆಯ ಅಸಾಧಾರಣ ಬದುಕು ಆ ಎಳೆವಯಸ್ಸಿನಲ್ಲಿ ಎಲ್ಲಿಲ್ಲದ ಪ್ರಭಾವ ಬೀರಿತು. ನಾನು ವಿಜ್ಞಾನ-ತಂತ್ರಜ್ಞಾನ ರಂಗವನ್ನು ಆಯ್ದುಕೊಳ್ಳುವಲ್ಲಿ , ಹಿಂಜರಿಯದೆ ಇಂಜಿನಿಯರಿಂಗ್ ರಂಗವನ್ನು ಪ್ರವೇಶಿಸುವಲ್ಲಿ ಅತಿ ಸೂಕ್ಷ್ಮವಾಗಿ ಸುಪ್ತ ಪ್ರಜ್ಞೆಯಲ್ಲೆಲ್ಲೋ ಮೇರಿ ಕ್ಯೂರಿಯ ಬದುಕು ಪ್ರೇರೇಪಿಸಿತ್ತು. ನಾವು ಬದುಕಿನಲ್ಲಿ ಆಯ್ದುಕೊಳ್ಳುವ ಮಾದರಿಗಳು, ಆದರ್ಶಗಳು ನಮ್ಮ ಬದುಕನ್ನು ಬದಲಿಸಬಲ್ಲವು ಎಂದು ನನ್ನ ನಂಬುಗೆ.

ಶಾಲೆಯಲ್ಲಿ ನನಗೆ ಮಾದರಿಯಾದ, ಮೇರಿ ಕ್ಯೂರಿ ಇಂದಿಗೂ ನನ್ನ ಬದುಕಿನ ಆದರ್ಶವಾಗಿ ಮುಂದುವರೆದಿದ್ದಾರೆ. ಅವರೊಡನೆ ನನ್ನೆದುರು ನೂರೆಂಟು ಮಹಿಳೆಯರಿದ್ದಾರೆ ಸ್ಫೂರ್ತಿ ನೀಡಲು, ನನ್ನ ಮುಂದಿರುವ ಹಾದಿಯನ್ನು ಸ್ಪಷ್ಟ ಪಡಿಸಲು.

ನೀವು ನಿಮ್ಮ ಸುತ್ತ ಮುತ್ತ ಕಣ್ಣಾಯಿಸಿದರೆ, ಈ ಪತ್ರಿಕೆಗಳ ಗ್ಲಾಮರ್ ಪುಟಗಳಾಚೆ ನೋಡಿದರೆ, ಸಾಧಕ ಮಹಿಳೆಯರು ಹೆಜ್ಜೆ ಹೆಜ್ಜೆಗೂ ನಮ್ಮ ಸುತ್ತ ಮುತ್ತಲೇ ಕಾಣಿಸುತ್ತಾರೆ. ನಮ್ಮ ಬದುಕಿಗಿರುವ ಅನಂತ ಸಾಧ್ಯತೆಯನ್ನು ತೆರೆದು ತೋರಿಸುತ್ತಾರೆ. ಇಂದು ನಮ್ಮೆದುರು ಬಹಳಷ್ಟು ಅವಕಾಶಗಳು ತೆರೆದಿವೆ. ಒಂದೂವರೆ ಶತಮಾನಗಳ ಹಿಂದೆ ಮಹಿಳೆಯರಿಗೆ ವೈದ್ಯರಂಗಕ್ಕೆ ಪ್ರವೇಶವಿರಲಿಲ್ಲ, ಅರ್ಧಶತಮಾನದ ಹಿಂದೆ, ಹೆಣ್ಣು ಮಕ್ಕಳಿಗೆ ಇಂಜಿನಿಯರಿಂಗ್ ರಂಗಕ್ಕೆ ಪ್ರವೇಶವಿರಲಿಲ್ಲ, 1992ರ ವರೆಗೆ ಹೆಣ್ಣು ಮಕ್ಕಳಿಗೆ ಸೇನೆಯ ಬಾಗಿಲು ಮುಚ್ಚಿತ್ತು. ಇಂದು ನಮ್ಮೆದುರು ಬಹಳಷ್ಟು ಬಾಗಿಲುಗಳು ತೆರೆದಿವೆ. ಸಾಧನೆಯ ರಂಗ ತೆರೆದು ನಿಂತಿದೆ. ಆ ಎಲ್ಲ ಅವಕಾಶಗಳನ್ನು ನಮ್ಮ ಹೆಣ್ಣು ಮಕ್ಕಳು ಬಳಸಿಕೊಳ್ಳಲಿ ಎಂಬುದು 'ಅಚಲ'ದ ಹಾರೈಕೆ.

★

## ಮಸಿಬಟ್ಟೆ

ಬಳಸಿ ಬಳಸಿ ಕಪ್ಪಾಗಿ ಬಿದ್ದಿದೆ
ಅಡುಗೆಮನೆ ಮೂಲೆಯಲ್ಲಿ
ಮಸಿಬಟ್ಟೆ
ದಿನಾ ಒಗೆದು ಶುಚಿಗೊಳಿಸಿದರೂ
ಹೆಸರು ಅದೇ - ಮಸಿಬಟ್ಟೆ

ಗಂಡನ ಹರಿದ ಲುಂಗಿಯ ತುಂಡೋ
ಬಣ್ಣ ಮಾಸಿದ ಹೆಗಲಿನ ಟವಲೋ
ಅಜ್ಜಿಯ ಹಳೇ ರವಿಕೆಯ ಚೂರೋ
ಬಳಕೆಗೆ ಬರುವುದು ಹೀಗೇ

ಬೆಂದ ಅನ್ನ ತರಕಾರಿ ತಪ್ಪಲೆ ಇಳಿಸಲು
ಚೆಲ್ಲುವ ಹಾಲು ಸಾರಿ ನೀರನ್ನೊರೆಸಲು
ಕಸಗುಡಿಸುವ ಪೊರಕೆಯ ಹಾಗೇ
ನೆಲ ಒರೆಸುವ ವಸ್ತ್ರದ ಹಾಗೆ
ಮುಗಿಯದ ದಾಸ್ಯದ ಮಸಿಬಟ್ಟೆ

ಒಲೆಯ ಬೂದಿ ಹಾರಿ ಹಾರಿ
ಮಡಕೆಯ ಮಸಿ ತಾಗಿ ತಾಗಿ
ಬೆಂಕಿಯ ಬಿಸಿಯಲಿ ನರಳಿ ನರಳಿ
ಕರಕಲಾಗುವ ಕನಸಿನ ಹಾಗೆ
ಮಸಿಯಾಗುವುದು ಮಸಿಬಟ್ಟೆ

- ಪ್ರಮೀಳ ಚೊಕ್ಕಾಡಿ

# ಮಹಿಳೆಯರಿಗೆ ಆತಂಕ ತಂದ ತೀರ್ಪು

**- ಹೇಮಲತಾ ಮಹಿಷಿ**

ವಿಶ್ವರಾಷ್ಟ್ರಸಂಸ್ಥೆ ಅಂತರಾಷ್ಟ್ರೀಯ ವರ್ಷವನ್ನಾಗಿ 1975ನ್ನು ಘೋಷಿಸಿದಾಗ ವಿಶ್ವದ ಗಮನ ಮಹಿಳೆಯರು ಎದುರಿಸುತ್ತಿದ್ದ ನಾನಾ ಸಮಸ್ಯೆಗಳತ್ತ, ಅವರು ಬೇರೆ-ಬೇರೆ ಕ್ಷೇತ್ರಗಳಲ್ಲಿ ಅನುಭವಿಸುತ್ತಿದ್ದ ತಾರತಮ್ಯತೆಯತ್ತ ಹರಿಯಿತು. ಮಹಿಳೆಯರಲ್ಲಿ ಈ ಬಗ್ಗೆ ಅರಿವು ಬೆಳೆದು ಅದರ ವಿರುದ್ಧ ಹೋರಾಟ ನಡೆಸಲು ಸಂಘಟನೆಗಳು ರೂಪುಗೊಂಡವು. ಮಹಿಳಾಪರ ಧ್ವನಿ ಕೇಳಿಸತೊಡಗಿತು.

ಆ ಕಾಲದ ಪತ್ರಿಕೆಗಳನ್ನು ಈಗ ಓದಿದರೆ, ಆಗ ನಮ್ಮ ದೇಶದಲ್ಲಿ ಮಹಿಳೆಯರು ಎದುರಿಸುತ್ತಿದ್ದ ಎರಡು ಮುಖ್ಯ ಸಮಸ್ಯೆಗಳು ನಮ್ಮ ಗಮನಕ್ಕೆ ಬರುತ್ತದೆ. ಪ್ರತಿದಿನವೆಂಬಂತೆ ದೆಹಲಿ ಮತ್ತಿತ್ತರ ಉತ್ತರಭಾರತದ ಪ್ರದೇಶಗಳಲ್ಲಿ ನಡೆಯುತ್ತಿದ್ದ ವರದಕ್ಷಿಣೆ ಸಾವುಗಳು (ಆತ್ಮಹತ್ಯೆ ಮತ್ತು ಬೆಂಕಿ ಹಚ್ಚಿ ಸಾಯಿಸುವುದು) ಒಂದು ಬಗೆಯ ಸುದ್ದಿಗಳಾದರೆ, ಪೋಲೀಸು ಠಾಣೆಗಳಲ್ಲಿ ಪೋಲೀಸರಿಂದಲೇ ಮಹಿಳೆಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರಗಳು ಇನ್ನೊಂದು ಬಗೆಯ ಸುದ್ದಿ. ಮತ್ತೊಂದು ಕತೆ, ನ್ಯಾಯಾಲಯದ ತೀರ್ಪುಗಳು. ವಿಚಾರಣೆಗೆ ಬಂದ ಕೆಲವೇ ಕೆಲವು ಪ್ರಕರಣಗಳಲ್ಲೂ ಆಪಾದನೆ ರುಜುವಾತಾಗದೇ ಆಪಾದಿತರ ಖುಲಾಸೆ. ಮೈಮೇಲೆ ಗಾಯಗಳಿಲ್ಲದಿರುವುದರಿಂದ, ವಿರೋಧ ವ್ಯಕ್ತ ಪಡಿಸದಿರುವುದರಿಂದ ಅವಳ ಒಪ್ಪಿಗೆಯಿಂದಲೇ ಸಂಭೋಗಕ್ರಿಯೆ ನಡೆದಿದೆ ಎಂದು ತಿಳಿಯಬೇಕು, ವೈದ್ಯಕೀಯ ತಪಾಸಣೆ ನಡೆಸಿಲ್ಲದಿರುವುದರಿಂದ / ತಡವಾಗಿ ನಡೆದಿರುವುದರಿಂದ ಸಂಭೋಗ ಕ್ರಿಯೆ ನಡೆದಿರುವುದು ರುಜುವಾತಾಗಿಲ್ಲ ಇತ್ಯಾದಿ ಕಾರಣಗಳು ಆ ಕಾಲದ ಅತ್ಯಾಚಾರಕ್ಕೆ ಸಂಬಂಧಿಸಿದ ತೀರ್ಪುಗಳಲ್ಲಿ ಹೇರಳವಾಗಿ ಕಾಣಸಿಗುತ್ತವೆ. ಹಾಗಾಗಿಯೇ, ಸಹಜವಾಗಿ, ಈ ಎರಡು ಮಹಿಳೆಯರ ವಿರುದ್ಧದ ದೌರ್ಜನ್ಯಗಳು ಮಹಿಳಾ ಸಂಘಟನೆಗಳನ್ನು ಪ್ರತಿಭಟನೆಗೆ ಪ್ರೇರೇಪಿಸಿದವು. ಅದೇ ಸಂದರ್ಭದಲ್ಲಿ ನಡೆದ ಮಥುರಾ ಅತ್ಯಾಚಾರ ಪ್ರಕರಣ ಮತ್ತು ರಮೀಜಾಬಿ ಪ್ರಕರಣ ಈ ಪ್ರತಿಭಟನೆ - ಹೋರಟಾಕ್ಕೆ ಚಾಲನೆಯನ್ನು ತಿದ್ದುಪಡಿಗೆ ದಾರಿ ಮಾಡಿಕೊಟ್ಟವು. ನ್ಯಾಯಾಲಯಗಳು ಮರುಚಿಂತನೆ ಮಾಡುವಂತೆ ಮಾಡಿದವು.

ಮಥುರಾ ಮತ್ತು ರಮೀಜಾಬೀ ಎಂಬ ಇಬ್ಬರು ಮಹಿಳೆಯರು ಪೋಲೀಸ್ ಠಾಣೆಗಳಲ್ಲಿ ಪೋಲೀಸ್ ಅಧಿಕಾರಿಗಳ ಅತ್ಯಾಚಾರಕ್ಕೆ ಬಲಿಯಾದವರು. ಮಥುರಾ ಒಬ್ಬ ಬುಡಕಟ್ಟು ಜನಾಂಗಕ್ಕೆ ಸೇರಿದ ಮಹಿಳೆಯಾಗಿದ್ದು ಕಳ್ಳತನದ ಆಪಾದನೆಯ ಮೇಲೆ ರಾತ್ರಿ ಪೋಲೀಸ್ ಠಾಣೆಯಲ್ಲಿ ಒಬ್ಬಳನ್ನೇ ಬಂಧಿಸಿಟ್ಟು ಬೆದರಿಸಿ, ಅತ್ಯಾಚಾರವೆಸಗಿದಾಗ, ತಕ್ಷಣವೇ ವೈದ್ಯಕೀಯ ತಪಾಸಣೆಯೂ ನಡೆಯದೇ, ಹೆದರಿಕೆಯಿಂದ ಪ್ರತಿಭಟನೆಯನ್ನೂ ಮಾಡದಿರುವುದರಿಂದ ಮೈಮೇಲೆ ಗಾಯಗಳಿಲ್ಲದೇ, ನ್ಯಾಯಾಲಯ ಪೋಲೀಸರ ವಿರುದ್ಧದ ಆಪಾದನೆಯನ್ನು ತಳ್ಳಿಹಾಕಿತು. ಅದೇ ರೀತಿ, ರಮೀಜಾಬಿಯನ್ನೂ ಹೈದರಾಬಾದ್ ಪೋಲೀಸರು ರಾತ್ರಿ ಒಬ್ಬಳನ್ನೇ ಪೋಲೀಸ್ ಠಾಣೆಯಲ್ಲಿ ಬಂಧಿಸಿಟ್ಟು ಅವಳ ಮೇಲೆ ಅತ್ಯಾಚಾರ ಮಾಡಿದರು. ವಿಷಯ ಹೊರಬಂದಾಗ ಹೈದರಾಬಾದ್ ನಾಗರೀಕರು ಸಿಡಿದೆದ್ದು ಅಂದಿನ ಸರ್ಕಾರ ಅಲುಗಾಡತೊಡಗಿತು. ಹಾಗಾಗಿ ಸರ್ಕಾರ ತಕ್ಷಣವೇ ಒಂದು ವಿಚಾರಣ ಆಯೋಗವನ್ನು ನೇಮಿಸಿ, ಪೋಲೀಸ್ ಅಧಿಕಾರಿಗಳನ್ನು ಅಮಾನತಿನಲ್ಲಿಟ್ಟು ಕ್ರಿಮಿನಲ್ ಮೊಕದ್ದಮೆಯನ್ನು ದಾಖಲು ಮಾಡಿತು, ಆದರೆ ಪುನಃ ನ್ಯಾಯಾಲಯ ಆಪಾದನೆ ರುಜುವಾತಾಗಿಲ್ಲವೆಂದು ಪೋಲೀಸ್ ಅಧಿಕಾರಿಗಳನ್ನು ಖುಲಾಸೆ ಮಾಡಿತು. ಅದೇ ರೀತಿ, ಇನ್ನೊಂದು ಪ್ರಕರಣದಲ್ಲಿ ಪ್ರೇಮವಿವಾಹ ಮಾಡಿಕೊಳ್ಳಲು ಮನೆಬಿಟ್ಟು ಓಡಿಬಂದಿದ್ದ ಪ್ರೇಮಿಗಳನ್ನು ಬೇರ್ಪಡಿಸಿ, ಹುಡುಗಿಯೊಬ್ಬಳನ್ನೇ ರಾತ್ರಿ ಪೋಲೀಸ್ ಠಾಣೆಗೆ ಕರೆತಂದು ಅತ್ಯಾಚಾರ ಮಾಡಿದ ಘಟನೆ ಮಹಾರಾಷ್ಟ್ರದಲ್ಲಿಯೂ ನಡೆಯಿತು.

ಈ ರೀತಿ ಒಂಟಿಯಾಗಿ ಮಹಿಳೆಯರನ್ನು ರಾತ್ರಿ ವೇಳೆ ಪೋಲೀಸ್‌ಠಾಣೆಗೆ ಕರೆತಂದು, ಪುರುಷ ಪೋಲೀಸ್ ಅಧಿಕಾರಿಗಳು ಮಾತ್ರವಿರುವ ಠಾಣೆಗಳಲ್ಲಿ ಅವರನ್ನು ಇಟ್ಟುಕೊಂಡು ಅತ್ಯಾಚಾರವೆಸಗುವ ಪ್ರಕರಣಗಳು ಜಾಸ್ತಿಯಾದಾಗ, ಮಹಿಳಾ ಸಂಘಸಂಸ್ಥೆ ಪ್ರತಿಭಟನೆ ಹೆಚ್ಚಿದಾಗ ಅನೇಕ ಸಾರ್ವಜನಿಕ ಹಿತಾಸಕ್ತಿಯ ರಿಟ್‌ಅರ್ಜಿಗಳು ಸರ್ವೋಚ್ಚನ್ಯಾಯಾಲಯದ ಮುಂದೆ ದಾಖಲಾದವು. ಸಂದೇಹಾಸ್ಪದ ಮಹಿಳೆಯರನ್ನು ಪೋಲೀಸ್‌ಠಾಣೆಗೆ ಕರೆಸಿ, ಅವರನ್ನು ಲಾಕಪ್‌ಗಳಲ್ಲಿರಿಸಿ, ಅವರ ಮೇಲೆ ನಡೆಸುವ

ದೌರ್ಜನ್ಯಗಳ ಬಗ್ಗೆ ನ್ಯಾಯಾಲಯದ ಗಮನ ಸೆಳೆಯಲು ಶಿಲಾಬರ್ಸೆ ಎನ್ನುವ ಪತ್ರಕರ್ತೆಯೊಬ್ಬರು ಮುಂಬಯಿ ಲಾಕಪ್‌ಗಳಲ್ಲಿ ನಡೆಯುತ್ತಿರುವ ಇಂತಹ ದೌರ್ಜನ್ಯಗಳ ಬಗ್ಗೆ ದೂರು ನೀಡಿ ಸರ್ವೋಚ್ಚ ನ್ಯಾಯಾಲಯಕ್ಕೆ ಪತ್ರ ಬರೆದಾಗ ನ್ಯಾಯಾಲಯವು ಆ ಪತ್ರವನ್ನೇ ರಿಟ್ ಅರ್ಜಿಯಾಗಿ ಸ್ವೀಕರಿಸಿ. ಪೋಲೀಸ್ ಠಾಣೆಯಲ್ಲಿರುವ ಮಹಿಳಾ ಬಂಧಿಗಳ ಬಗ್ಗೆ ಅನೇಕ ನಿರ್ದೇಶನಗಳನ್ನು ಸರ್ಕಾರಕ್ಕೆ ಕೊಟ್ಟಿತು.

ಸೂಕ್ತ ಸ್ಥಳಗಳಲ್ಲಿ ಮಹಿಳಾ ಕೈದಿಗಳಿಗಾಗಿಯೇ ಪ್ರತ್ಯೇಕ ಲಾಕ್‌ಅಪ್‌ಗಳನ್ನು ಸ್ಥಾಪಿಸಬೇಕು, ಮಹಿಳಾ ಪೋಲೀಸ್‌ಪೇದೆಗಳು ಅವರನ್ನು ನೋಡಿಕೊಳ್ಳಬೇಕು, ಮಹಿಳಾ ಪೋಲೀಸ್ ಅಧಿಕಾರಿಗಳ ಮುಂದೆಯೇ ಅವರ ತನಿಖೆ ನಡೆಯಬೇಕು, ಮಹಿಳೆಯರನ್ನು ಪೋಲೀಸ್‌ಠಾಣೆಗೆ ಕರೆತಂದಾಗ ಹತ್ತಿರದ ಕಾನೂನು ಸಲಹಾ ಸಮಿತಿಗೆ ಮಾಹಿತಿ ಕೊಡಬೇಕು ಮತ್ತು ಆಗಿಂದಾಗ್ಗೆ ಸೆಷನ್ಸ್ ನ್ಯಾಯಾಧೀಶರು ಕಾರಾಗೃಹಗಳಿಗೆ ಹಠಾತ್ ಭೇಟಿನೀಡಿ ಮಹಿಳಾ ಕೈದಿಗಳ ಸ್ಥಿತಿಗತಿಗಳನ್ನು ಪರಿಶೀಲಿಸಬೇಕು ಮತ್ತು ಅವರಿಗೆ ಉಚಿತ ಕಾನೂನು ನೆರವನ್ನು ಒದಗಿಸಬೇಕು ಇವು ಸರ್ವೋಚ್ಚ ನ್ಯಾಯಾಲಯ ನೀಡಿದ ಕೆಲವು ಮುಖ್ಯ ನಿರ್ದೇಶನಗಳು ಇದಾದ ನಂತರ ಬೇರೆ ಬೇರೆ ಮೊಕದ್ದಮೆಗಳಲ್ಲಿ, ಮಹಿಳೆಯರನ್ನು ಪೋಲೀಸ್ ಠಾಣೆಯಲ್ಲಿ ರಾತ್ರಿ ಇಟ್ಟುಕೊಳ್ಳದಂತೆ, ರಾತ್ರಿ ವೇಳೆ ಅವರನ್ನು ಬಂಧಿಸಿದಂತೆ, ಮನೆಯವರು ಯಾರಾದರೂ ಅಂತಹ ಮಹಿಳೆಯರ ಜೊತೆ ಇರುವಂತೆ, ನಿರ್ದೇಶನ ನೀಡಲಾಯಿತು.

ಇದಾದ ನಂತರವೇ ಸರ್ಕಾರಗಳು ಎಚ್ಚೆತ್ತು ಈ ಬಗ್ಗೆ ಹಲವಾರು ಕ್ರಮಗಳನ್ನು ಕೈಗೊಂಡವು. ಮಹಿಳೆಯರಿಗೆ ಪೋಲೀಸ್ ಇಲಾಖೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರವೇಶ ದೊರಕಿತು, ಮಹಿಳಾ ಪೋಲೀಸ್ ಠಾಣೆಗಳ ಸ್ಥಾಪನೆಯಾದವು, ಮಹಿಳಾ ಪೋಲೀಸ್ ಪಡೆಗಳು ರಚನೆಯಾದವು, ಸಹಾಯವಾಣಿಗಳು, ದೂರವಾಣಿ ಕೇಂದ್ರಗಳು ನೆರವಿಗೆ ಬಂದವು. ಮಹಿಳಾ ಸಂಘ-ಸಂಸ್ಥೆಗಳು ಪೋಲೀಸ್ ಇಲಾಖೆಯೊಂದಿಗೆ ಸಂಪರ್ಕ ಸಾಧಿಸಿದವು. ಪೋಲೀಸ್‌ಠಾಣೆಗಳ ಕಾಂಪೌಂಡ್‌ಗೋಡೆಗಳ ಎತ್ತರ ಕಡಿಮೆಯಾಗಿ ಒಳಗೆ ನಡೆಯುವುದು ಸಾರ್ವಜನಿಕರಿಗೆ ನಿಚ್ಚಳವಾಗಿ ಕಾಣಿಸತೊಡಗಿದವು. ಪೋಲೀಸ್ ಠಾಣೆಗಳಲ್ಲಿ ಮಹಿಳೆಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರದ ಪ್ರಕರಣಗಳು ಕಡಿಮೆಯಾದವು. ಮಹಿಳೆಯರು ನೆಮ್ಮದಿಯಿಂದ ನಿಟ್ಟುಸಿರು ಬಿಟ್ಟರು, ಧೈರ್ಯವಾಗಿ ಪೋಲೀಸ್‌ಠಾಣೆಗೆ ದೂರು ಕೊಡಲು ಹೋಗತೊಡಗಿದರು.

ಆದರೆ ಇತ್ತೀಚೆಗೆ ಹೊರಬಂದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಮತ್ತೊಮ್ಮೆ ಮಹಿಳೆಯರ ನಿದ್ದೆ ಕೆಡಿಸತೊಡಗಿದೆ, ನೆಮ್ಮದಿಗೆ ಭಂಗ ತರತೊಡಗಿದೆ. ಮಹಾರಾಷ್ಟ್ರ ಸರ್ಕಾರ - ವಿರುದ್ಧ ಕ್ರಿಶ್ಚಿಯನ್ ಕಮ್ಯೂನಿಟಿವೆಲ್‌ಫೇರ್ ಕೌನ್ಸಿಲ್ ಆಫ್ ಇಂಡಿಯಾ ಮೊಕದ್ದಮೆಯಲ್ಲಿ ಈವರೆಗೆ ಮಹಿಳೆಯರ ಹೋರಾಟ ಸಾಧಿಸಿದ ಫಲವನ್ನು ಅರ್ಥವಿಹೀನವಾಗಿಸಿದೆ, ವ್ಯರ್ಥವಾಗಿಸಿದೆ.

ನಾಡಿಪುರದ ಕ್ರೈಬ್ರಾಂಚಿಗೆ ಸೇರಿದ ಕೆಲವು ಪೋಲೀಸರು ಜುನಿಯಸ್ ಆಡಂ ಇಲ್ಲಮಟ್ಟ ಎಂಬುವವನನ್ನು 23-6-1993ರಂದು ಬಂಧಿಸಿದ್ದರು. ಠಾಣೆಯಲ್ಲಿ ಬಂಧನದಲ್ಲಿದ್ದಾಗಲೇ ಅವನು ಮರಣ ಹೊಂದಿದ. ಅವನ ಹೆಂಡತಿ ಜರೀನಾ ಆಡಂ ಗಂಡನ ಬಗ್ಗೆ ವಿಚಾರಿಸಲು ಠಾಣೆಗೆ ಹೋದಾಗ ಆಕೆಯನ್ನು ಪೋಲೀಸ್ ಠಾಣೆಯಲ್ಲಿ ಬಂಧಿಸಿ ಅವಳ ಮೇಲೆ ಅತ್ಯಾಚಾರ ಮಾಡಲಾಯಿತು ಎಂಬುದು ಈ ಮೊಕದ್ದಮೆಯಲ್ಲಿನ ಆರೋಪ. ಇಲಾಖೆಯ ತನಿಖೆಯ ನಂತರ ಹತ್ತು ಪೋಲೀಸ್ ಅಧಿಕಾರಿಗಳ ಮೇಲೆ ನಾನಾ ಅಪರಾಧಗಳಿಗಾಗಿ ಕ್ರಿಮಿನಲ್ ಮೊಕದ್ದಮೆ ಹೂರಲಾಯಿತು. ಅವನ್ನು ಕೊಲೆಯ ಆಪಾದನೆಯಿಂದ ವಿಮುಕ್ತಿಗೊಳಿಸಿದರೂ ಕೆಲವೊಂದು ಆಪಾದನೆಗಳ ಮೇಲೆ ಮೂರುವರ್ಷಗಳ ಜೈಲುವಾಸ ವಿಧಿಸಲಾಯಿತು. ಅದರ ಮೇಲೆ ಮಹಾರಾಷ್ಟ್ರ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ಅಪೀಲು ಇನ್ನೂ ವಿಚಾರಣೆಯಲ್ಲಿದೆ.

ಕ್ರಿಶ್ಚಿಯನ್ ಕಮ್ಯೂನಿಟಿ ವೆಲ್‌ಫೇರ್ ಕೌನ್ಸಿಲ್ ಆಫ್ ಇಂಡಿಯಾ ಮತ್ತು ಜರೀನಾ ಆಡಂ ಮಹಾರಾಷ್ಟ್ರ ಉಚ್ಚನ್ಯಾಯಾಲಯದಲ್ಲಿ ಹಾಕಿದ ಕ್ರಿಮಿನಲ್ ರಿಟ್‌ಪೆಟಿಶನ್‌ನಲ್ಲಿ ನ್ಯಾಯಾಲಯವು ಜರೀನಾಗೆ 1.50,000 ರೂ.ಗಳ ಪರಿಹಾರ ನೀಡಿದ್ದಲ್ಲದೇ ಮಹಿಳೆಯರನ್ನು ಬಂಧಿಸುವಾಗ ಅನುಸರಿಸಬೇಕಾದ ವಿಧಿವಿಧಾನದ ಬಗ್ಗೆಯೂ ಮಾರ್ಗದರ್ಶಿ ಸೂತ್ರಗಳನ್ನು ಹಾಕಿಕೊಟ್ಟಿತು. ಅದರಂತೆ ಮಹಿಳಾ ಕಾನ್‌ಸ್ಟೇಬಲ್ ಇಲ್ಲದೇ ಯಾವ ಮಹಿಳೆಯನ್ನೂ ಬಂಧಿಸಬಾರದು, ಇಟ್ಟುಕೊಳ್ಳಬಾರದು, ಅಲ್ಲದೇ ಯಾವುದೇ ಸಂದರ್ಭದಲ್ಲೂ ಸೂರ್ಯಾಸ್ತದ ನಂತರ ಸೂರ್ಯೋದಯದ ಮೊದಲು ಬಂಧಿಸಬಾರದು. ಈ ಬಗ್ಗೆ

ರಾಜ್ಯ ಸರ್ಕಾರ ತಕ್ಷಣ ಸೂಕ್ತ ನಿರ್ದೇಶನ ನೀಡತಕ್ಕದ್ದೆಂದು ನ್ಯಾಯಾಲಯ ಆದೇಶ ನೀಡಿತು. ಈ ತೀರ್ಪಿನ ಮೇಲೆ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ ಅಪೀಲುಗಳಲ್ಲಿ ಪರಿಗಣನೆಗೆ ಬಂದ ಮುಖ್ಯ ಅಂಶಗಳೆಂದರೆ, ಮಹಿಳೆಯರನ್ನು ಬಂಧಿಸುವಲ್ಲಿ ಮಹಾರಾಷ್ಟ್ರ ಪೋಲೀಸರು ಅನುಸರಿಸಿದ ಕ್ರಮ ನ್ಯಾಯಬದ್ಧವಾಗಿದೆಯೇ ಎಂಬುದು. ಸರ್ವೋಚ್ಚ ನ್ಯಾಯಾಲಯವು ಹಿಂದಿನ ಮೊಕದ್ದಮೆಗಳಲ್ಲಿ ಅದೇ ನ್ಯಾಯಾಲಯವು ನೀಡಿರುವ ನಿರ್ದೇಶನಗಳನ್ನು ಗಮನದಲ್ಲಿಟ್ಟುಕೊಂಡು ಈ ತೀರ್ಪಿನಲ್ಲಿ ಕೆಲವೊಂದು ಮಾರ್ಪಾಡುಗಳನ್ನು ಮಾಡಿರುವುದು ಮಹಿಳೆಯರೆಲ್ಲರಲ್ಲಿ ಆತಂಕ ಉಂಟು ಮಾಡಿದೆ.

ಸಾಮಾನ್ಯ ಪ್ರಸಂಗಗಳಲ್ಲಿ ಹಿಂದಿನ ನಿರ್ದೇಶನಗಳನ್ನು ಅನುಸರಿಸಬೇಕಾಗಿದ್ದರೂ, ನಿರ್ದಿಷ್ಟ ಪ್ರಕರಣಗಳಲ್ಲಿ ಮಹಿಳಾ ಪೋಲೀಸರು ಲಭ್ಯವಿಲ್ಲದಿರುವಾಗ ಅಥವಾ ಅವರನ್ನು ಕರೆಸುವಲ್ಲಿ ವಿಳಂಬ ಉಂಟಾಗಿ ಅಪರಾಧಿ ತಪ್ಪಿಸಿಕೊಳ್ಳಬಹುದೆನ್ನುವ ಸಂದರ್ಭವಿರುವಾಗ ಪೋಲೀಸರು ಮಹಿಳಾ ಕಾನ್ಸ್‌ಟೇಬಲ್ ಇಲ್ಲದೆಯೂ ಮಹಿಳೆಯನ್ನು ಬಂಧಿಸಬಹುದು. ರಾತ್ರಿ ವೇಳೆಯಲ್ಲಿಯೂ ಬಂಧಿಸಬಹುದು ಎಂದು ಮಾರ್ಪಾಡನ್ನು ಮಾಡಿದೆ. ಬಂಧನದ ಮೊದಲಾಗಲೀ ಅಥವಾ ಆಮೇಲಾಗಲೀ ಈ ಬಗ್ಗೆ ಕಾರಣಗಳನ್ನು ದಾಖಲಿಸಬೇಕು ಎಂದು ತಿಳಿಸಿದೆ.

ಹಿಂದಿನ ಸರ್ವೋಚ್ಚ ನ್ಯಾಯಾಲಯದ ಬಿಗಿ ಧೋರಣೆ ಇಂದಾಗಿ ರಾಜ್ಯ ಸರ್ಕಾರಗಳು ಮಹಿಳಾ ಪೋಲೀಸ್ ಅಧಿಕಾರಿಗಳ ನೇಮಕಾತಿ, ಮಹಿಳೆಯರ ಬಂಧನದ ಬಗ್ಗೆ ಹೆಚ್ಚಿನ ಆಸಕ್ತಿವಹಿಸಿ ಕಾರ್ಯೋನ್ಮುಖವಾಗಿದ್ದವು. ಆದರೆ, ಈಗ ಆ ಬಿಗಿಯನ್ನು ಸಡಲಿಸಿರುವುದು ತೂಕಡಿಸುವವರಿಗೆ ಹಾಸಿಗೆ ಹಾಕಿ ಕೊಟ್ಟಂತೆ ಆಗುವುದಿಲ್ಲವೆ? ಎಂಬುದು ಮಹಿಳೆಯರ ಆತಂಕ. ಬೆರಳು ಕೊಟ್ಟರೆ ಹಸ್ತನುಂಗುವ ಪೋಲೀಸ್ ಇಲಾಖೆಯ ಚಾಣಕ್ಷರು ಈ ಸಡಲಿಕೆಯ ದುರ್ಲಾಭ ಖಂಡಿತಾ ಪಡೆಯುತ್ತಾರೆ, ಈ ಬಿಗಿ ನಿಯಮ ಇದ್ದಾಗಲೂ ಮಹಿಳೆಯರ ಮೇಲೆ ಠಾಣೆಗಳಲ್ಲಿ ನಡೆಯುವ ದೌರ್ಜನ್ಯಗಳನ್ನು ಸಂಪೂರ್ಣವಾಗಿ ತೊಡೆದು ಹಾಕಲು ಅಸಾಧ್ಯವಾದಾಗ ಸರ್ವೋಚ್ಚ ನ್ಯಾಯಾಲಯವೇ ಈ ರೀತಿಯ ರಿಯಾಯಿತಿಗಳನ್ನು ಸೃಷ್ಟಿಸಿಕೊಟ್ಟರೆ ಪರಿಣಾಮ ಏನಾಗಬಹುದು. ಬರವಣಿಗೆಯಲ್ಲಿ ಕಾರಣ ದಾಖಲಿಸುವುದು ಅವರಿಗೆ ಕಷ್ಟದ ಕೆಲಸವೇ? ಮಹಿಳಾ ನೇಮಕಾತಿಯ ಗತಿ ಕುಂಠಿತವಾಗುವುದಿಲ್ಲವೆ? ಪುನಃ ಮಥುರಾ ಪ್ರಕರಣದ ಕಾಲಕ್ಕೆ ಹಿಂದಕ್ಕೆ ಹೋಗುತ್ತಿದ್ದೇವೆಯೇ? ಈ ರೀತಿಯ ನಾನಾ ಸಂದೇಹಗಳು ತಲೆ ಎತ್ತಿವೆ. ಸಂದೇಹ ನಿಜವಾದಾಗ ಕಾಲ ಮಿಂಚಿಹೋಗಿರುತ್ತದೆ. ಮಹಿಳಾ ಹೋರಾಟ ಪುನಃ ಮೊದಲಿನಿಂದ ಆರಂಭಿಸಬೇಕಾಗುತ್ತದೆ. ಮಹಿಳೆಯರ ಎಲ್ಲಾ ಹೋರಾಟಗಳೂ ಈ ರೀತಿ ಹಿನ್ನೆಡೆ ಸಾಧಿಸುತ್ತಾ ಹೋದರೆ ಉಳಿಯುವುದೇನು? ಈ ತೀರ್ಪಿನ ಪುನರ್‌ವಿಮರ್ಶೆಯಾಗ ಬೇಕೆನ್ನುವುದು ಮಹಿಳೆಯರ ಅಪೇಕ್ಷೆಯಾಗಿದೆ.

ಮಹಿಳೆಯರು ಅಂತಹ ಆತಂಕವಾದಿಗಳೇ? ತಕ್ಷಣವೇ ರಾತ್ರಿಯಲ್ಲೂ ಬಂಧಿಸಬೇಕಾದ ಅಗತ್ಯವೇಗಿರುತ್ತದೆ? ಬಂಧಿಸಿದರೂ ಠಾಣೆಯಲ್ಲಿಡಬೇಕೆ? ರಿಮ್ಯಾಂಡ್ ಹೋಂಗೆ ಕಳಿಸಬಹುದಲ್ಲವೆ? ಮನೆಯಿಂದ ತಪ್ಪಿಸಿಕೊಳ್ಳದಂತೆ ರಾತ್ರಿ ಪೋಲೀಸ್ ಕಾವಲು ಹಾಕಬಹುದಲ್ಲವೇ? ಅದರಲ್ಲೂ ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಆ ವಿಷಯದ ಬಗ್ಗೆ ಮಾರ್ಪಾಡು ಮಾಡಲು ಸೂಕ್ತ ಸಂದರ್ಭ ಒದಗಿ ಬಂದಿತ್ತೇ? ಗಂಡನ ಬಗ್ಗೆ ವಿಚಾರಿಸಲು ಹೋದ ಹೆಂಡತಿಯ ಬಂಧನ ಅಗತ್ಯವಾಗಿತ್ತೇ? ಈ ರೀತಿಯ ನಾನಾ ಅನುಮಾನಗಳು ಕಾಡುತ್ತವೆ. ಪೋಲೀಸ್ ಎನ್‌ಕೌಂಟರ್ ಹೆಸರಿನಲ್ಲಿ ನಕ್ಸಲೈಟ್ ಎಂದು ಹೆಸರಿಸಿದ ಇಬ್ಬರು ಯುವತಿಯರನ್ನು ಗುಂಡಿಟ್ಟುಕೊಂದ ಪೋಲೀಸರ ಕ್ರಮ ಯಾರಿಗೂ ಸಮರ್ಥನೀಯವಾಗಿ ಕಾಣುತ್ತಿರದ ಸಂದರ್ಭದಲ್ಲಿ ಈ ಅನುಮಾನಗಳು ಕಾಡುವುದು ಸಹಜ. ಅನುಮಾನ ನಾಳೆ ನಿಜವಾದಲ್ಲಿ ಆಶ್ಚರ್ಯವಿಲ್ಲ, ಇನ್ನು ಮುಂದೆ ಮಹಿಳೆಯರನ್ನು ಅನುಮಾನದ ಮೇಲೆ ರಾತ್ರಿ ವೇಳೆ ಠಾಣೆಗಳಲ್ಲಿ ಇಟ್ಟುಕೊಂಡರೂ ನ್ಯಾಯಾಲಯಗಳು ಒಪ್ಪುತ್ತವೆ, ಮಹಿಳಾ ಕಾನ್ಸ್‌ಟೇಬಲ್ ಇಲ್ಲದಿದ್ದರೂ ತಪ್ಪೆಂದು ಹೇಳುವುದಿಲ್ಲ, ಏನೋ ಸಬೂಬು ಬರೆದಿಟ್ಟರೂ ಸಾಕು, ಏಕೆಂದರೆ ಸರ್ವೋಚ್ಚನ್ಯಾಯಾಲಯದ ತೀರ್ಪು ರಾಷ್ಟ್ರದ ಎಲ್ಲಾ ನ್ಯಾಯಾಲಯಗಳ ಮೇಲೆ ಬಂಧನಕಾರಿ, ಅದೇ ಸದ್ಯದ ಕಾನೂನು.

ಹಿಂದಿನ ತೀರ್ಪು ಮೂವರು ನ್ಯಾಯಾಧೀಶರ ಪೀಠದ ತೀರ್ಪಾಗಿದ್ದು ಈಗಿನ ತೀರ್ಪು ಇಬ್ಬರು ನ್ಯಾಯಾಧೀಶರ ಪೀಠದ ತೀರ್ಪಾಗಿರುವುದರಿಂದ ಇನ್ನೂ ಮಹಿಳೆಯರಿಗೆ ಪೂರ್ಣ ನಿರಾಶೆಯುಂಟಾಗಿಲ್ಲ. ನಂತರದ ಈ ತೀರ್ಪು ಪರಿಣಾಮಕಾರಿಯಾಗಲಾರದೆಂದು ವಾದಮಾಡಲು ಅವಕಾಶವಿದೆ.

★

# ಪ್ರತಿ ವ್ಯಕ್ತಿಯ ಮತ್ತು ಒಟ್ಟಾರೆ ಸಮಾಜದ ಸರ್ವೋದಯವೇ ಭಾರತದ ಗುರಿಯಾಗಬೇಕು

**- ಮಹಾತ್ಮಾ ಗಾಂಧಿ**

ಮಹಾತ್ಮಾಜಿಯವರ ಮಹದಾಸೆಯಾದ ವರ್ಗರಹಿತ ಸಮಾಜದ ನಿರ್ಮಾಣದತ್ತ ನಿರಂತರವಾಗಿ ಶ್ರಮಿಸುತ್ತಿರುವ ಸರ್ಕಾರವು ರಾಜ್ಯದ ಪ.ಜಾ. / ಪ.ಪಂ. ಹಿಂದುಳಿದವರು, ಅಲ್ಪಸಂಖ್ಯಾತರು ಮತ್ತು ಗ್ರಾಮೀಣ ಮಹಿಳೆಯರ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸಿದೆ. ಬಾಪೂಜಿಯ ಕನಸಿನ ಸರ್ವೋದಯವನ್ನು ನನಸಾಗಲು ಶ್ರಮಿಸುತ್ತಿದೆ.

## ಸಮೃದ್ಧ ಸ್ವಾವಲಂಬಿ ರಾಜ್ಯ ನಿರ್ಮಾಣದತ್ತ ದೃಢ ಸಂಕಲ್ಪದ ದಾಪುಗಾಲು

- ☆ ಪ್ರತಿ ವಿಧಾನ ಸಭಾಕ್ಷೇತ್ರದಲ್ಲೂ ಸಾರ್ವತ್ರಿಕ ರಚನಾತ್ಮಕ ಕಾರ್ಯ ಚಟುವಟಿಕೆಗಳಿಗಾಗಿ ಎರಡೆರಡು ಅಂಬೇಡ್ಕರ್ ಭವನಗಳ ನಿರ್ಮಾಣ.
- ☆ ದೌರ್ಜನ್ಯಕ್ಕೆ ತುತ್ತಾದ ಜನರ ಸಾಂತ್ವನಕ್ಕಾಗಿ ನೇರಸಂವಾದ 3274 ಪ್ರಕರಣಗಳಲ್ಲಿ ರೂ. 673 ಕೋಟಿ ಪರಿಹಾರ.
- ☆ ಮಹಿಳಾ ಸ್ವಾವಲಂಬಿಗಾಗಿ ಕೌಶಲ್ಯ ತರಬೇತಿ ಕಾರ್ಯಕ್ರಮ 4000 ಪರಿಶಿಷ್ಟ ಜಾತಿ ಮಹಿಳೆಯರಿಗೆ ರೂ. 4.00 ಕೋಟಿ ವೆಚ್ಚದಲ್ಲಿ ತರಬೇತಿ.
- ☆ 15000 ಪರಿಶಿಷ್ಟ ಯುವಕರಿಗೆ ವೃತ್ತಿಪರ ತರಬೇತಿ, 8000 ಪರಿಶಿಷ್ಟ ಜಾತಿ ಯುವಕರಿಗೆ ಕಂಪ್ಯೂಟರ್ ತರಬೇತಿ.
- ☆ ಶೈಕ್ಷಣಿಕವಾಗಿ ಹಿಂದುಳಿದ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಹೊಸದಾಗಿ 75 ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳ ಆರಂಭ.
- ☆ ವಿದೇಶದಲ್ಲಿ ಉನ್ನತ ವ್ಯಾಸಂಗ - 20 ಪ.ಜಾ. ವಿದ್ಯಾರ್ಥಿಗಳಿಗೆ ಆರ್ಥಿಕ ನೆರವು ರೂ. 2 ಕೋಟಿ.
- ☆ ವಸತಿರಹಿತ ಪ.ಜಾ. ಯವಕರಿಗೆ 15000 ಅಂಬೇಡ್ಕರ್ ಗೃಹಗಳು ರೂ. 60 ಕೋಟಿ ವೆಚ್ಚದಲ್ಲಿ 6000 ಆಶ್ರಯ ಮನೆಗಳು ವಿತರಣೆ.
- ☆ ಪರಿಶಿಷ್ಟರ ಹಿತರಕ್ಷಣೆಗೆ ಅನುಸೂಚಿತ ಜಾತಿ : ವರ್ಗಗಳ ಆಯೋಗ ರಚನೆ.
- ☆ ಪ್ರತಿ ತಿಂಗಳು ನಿಗದಿತ ದಿನದಂತು ನೇರವಾಗಿ ಸಚಿವರುಗಳಿಂದ ಸಾರ್ವಜನಿಕರ ಅಹವಾಲು ಸ್ವೀಕಾರ.
- ☆ ನವೋದಯ ಶಾಲೆಗಳಲ್ಲಿ ಪ್ರತಿ ವಿದ್ಯಾರ್ಥಿಯ ಭೋಜನ ವೆಚ್ಚ ರೂ. 350-00 ರಿಂದ 500ಕ್ಕೆ ಹೆಚ್ಚಳ.
- ☆ ಮಾಧ್ಯಮಿಕ ಶಾಲಾ ಪ.ಜಾ. ವಿದ್ಯಾರ್ಥಿಗಳಿಗೆ 250/- ಮತ್ತು ಪ್ರೌಢ ಶಾಲಾ ವಿದ್ಯಾರ್ಥಿನಿಯರಿಗೆ ರೂ. 500/- ಕಲಿಕಾ ಪ್ರೋತ್ಸಾಹಧನ.
- ☆ ರಾಜ್ಯದಲ್ಲಿ ಒಟ್ಟು 1707 ಬ್ಯಾಂಕ್ ಲಾಗ್ ಹುದ್ದೆಗಳನ್ನು ಗುರುತಿಸಿದ್ದು, ಅದರಲ್ಲಿ 7628 ಹುದ್ದೆಗಳಿಗೆ ನೇಮಕಾತಿ.

## ಗ್ರಾಮೀಣಾಭಿವೃದ್ಧಿಗೆ ಹೊಸ ಆಯಾಮ. ಸ್ವರ್ಣ ಜಯಂತಿ ಸ್ವರೋಜ್‌ಗಾರ್ ಯೋಜನೆ

- 37116 ಸ್ವರೋಜ್‌ಗಾರಿಗಳಿಗೆ ತರಬೇತಿ. ನೀಡಲಾಗಿದೆ. ಅದರಲ್ಲಿ 9284 ವ್ಯಕ್ತಿಗಳು ಮತ್ತು 27832 ಸ್ವ-ಸಹಾಯ ಸಂಘಗಳಿಗೆ ಸೇರಿದ್ದಾರೆ.
- ಇಂದಿರಾ ಆವಾಸ್ ಯೋಜನೆ
  ಗ್ರಾಮೀಣ ವಸತಿರಹಿತರಿಗಾಗಿ 33,299 ಗೃಹ ನಿರ್ಮಾಣ ಕಾಮಗಾರಿ 28,190 ಪೂರ್ಣ ರೂ. 66.60 ಕೋಟಿ ವೆಚ್ಚ
- ಗ್ರಾಮೀಣ ಆವಾಸ ಯೋಜನೆ
  ಬಡತನ ರೇಖೆಗಿಂತ ಕೆಳಗಿರುವ ಗ್ರಾಮೀಣ ಪ್ರದೇಶದ ಕಡುಬಡವರಿಗಾಗಿ ರೂ. 10.28 ಕೋಟಿ ವೆಚ್ಚದಲ್ಲಿ 4318 ಮನೆ ನಿರ್ಮಾಣ
- ಸ್ವಚ್ಛ ಗ್ರಾಮ ಯೋಜನೆ
  ಐದು ಮೂಲಭೂತ ಅಗತ್ಯಗಳಾದ ರಸ್ತೆ, ಸಮುದಾಯ ಗೊಬ್ಬರಗುಂಡಿ, ಹೊಗೆರಹಿತ ಚೂಲಾ ಗೃಹ ಮತ್ತು ಸಮುದಾಯ ಶೌಚಾಲಯ ಮತ್ತು ಶಾಲೆಗಳಲ್ಲಿ ಶೌಚಾಲಯ ನಿರ್ಮಾಣಕ್ಕಾಗಿ 27 ಜಿಲ್ಲೆಗಳ 1300 ಹಳ್ಳಿಗಳ ಆಯ್ಕೆ. ರೂ. 110.04 ಕೋಟಿ ವೆಚ್ಚ ಕಾಮಗಾರಿ ಪ್ರಗತಿ.

**- ಕರ್ನಾಟಕ ವಾರ್ತೆ**

# ಗರ್ಭನಿರೋಧಕ ಲಸಿಕೆ

**- ಡಾ|| ವಸುಂಧರಾ ಭೂಪತಿ**

ಹೊಸದೆಹಲಿಯ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಇಮ್ಯುನಾಲಜಿಯಲ್ಲಿ ಹಲವಾರು ದೇಶಗಳ ವಿಜ್ಞಾನಿಗಳು ಹಾಗೂ ವೈದ್ಯರು ಒಟ್ಟು ಸೇರಿ 'ರಿಪ್ರೊಡಕ್ಟಿವ್ ಇಮ್ಯುನಾಲಜಿ'ಯಲ್ಲಿ ನಡೆಯುತ್ತಿರುವ ಸಂಶೋಧನೆಯ ಬಗ್ಗೆ ಕೆಲ ತಿಂಗಳ ಹಿಂದೆ ಚರ್ಚಿಸಿದರು. ಜನಸಂಖ್ಯೆ ನಿಯಂತ್ರಣಕ್ಕಾಗಿ ತಯಾರಿಸಲಾದ ಗರ್ಭನಿರೋಧಕ ಲಸಿಕೆಗಳ ಇತ್ತೀಚಿನ ಸಂಶೋಧನೆ ಹಾಗೂ ಬೆಳವಣಿಗೆಯ ಬಗ್ಗೆ ವ್ಯಾಪಕ ಚರ್ಚೆ ಅಲ್ಲಿ ನಡೆಯಿತು. ಲಸಿಕೆಯು ಪರಿಣಾಮಕಾರಿಯಾದುದಲ್ಲ, ಸುರಕ್ಷಿತವಾದುದಲ್ಲ ಹಾಗೂ ಅದನ್ನು ಉಪಯೋಗಿಸಿ ನಿಲ್ಲಿಸಿದ ನಂತರ ಹುಟ್ಟುವ ಮಕ್ಕಳ ದೈಹಿಕ ಹಾಗೂ ಮಾನಸಿಕ ಆರೋಗ್ಯದ ಬಗ್ಗೆ ಖಾತ್ರಿ ಕೊಡುವಂತಹುದಲ್ಲ. ಈ ನಿಟ್ಟಿನಲ್ಲಿ ಮೂರು ದಶಕಗಳಿಂದ ಸಂಶೋಧನೆ ನಡೆಯುತ್ತಿದ್ದರೂ ಕೆಲವು ನ್ಯೂನತೆಗಳು ಕಂಡುಬಂದಿವೆ. ಅವು ಯಾವುವೆಂದರೆ,

**ಅ.** ಅಲ್ಪ ಪರಿಣಾಮಕಾರಿ

**ಆ.** ದೇಹದ ರಕ್ಷಣಾ ವ್ಯವಸ್ಥೆಯಲ್ಲಿ ಏರುಪೇರು.

**ಇ.** ಲಸಿಕೆಯು ಸಂಪೂರ್ಣ ಪರಿಣಾಮಕಾರಿ ವಿಧಾನವೆಂದು ಸಾಬೀತಾಗುವ ಮುಂಚೆಯೇ ಪ್ರಯೋಗಿಸುವುದು.

**ಈ.** ಸ್ತ್ರೀ ಇಷ್ಟಪಡದಿದ್ದಲ್ಲಿ ಹಾಗೂ ಅದನ್ನು ತೆಗೆದುಕೊಳ್ಳುವಾಗ ದುಷ್ಪರಿಣಾಮಗಳ ಅನುಭವವಾದರೆ ನಿಲ್ಲಿಸುವ ಸ್ವಾತಂತ್ರ್ಯವಿಲ್ಲ.

ಮಹಿಳೆಯರನ್ನು ದುಷ್ಪರಿಣಾಮಗಳಿಗೆ ಒಡ್ಡುವುದು ನ್ಯಾಯಯುತವೆ? ಈ ಲಸಿಕೆಯ ಪ್ರಯೋಗದಿಂದ ಅಲರ್ಜಿಯಂತಹ ತೊಂದರೆಗಳು (ಜೀವಕ್ಕೆ ಅಪಾಯ ತರುವಂತಹವುಗಳು) ಉಂಟಾಗಬಹುದು. ರೋಗ ನಿರೋಧಕ ಶಕ್ತಿ ಕುಗ್ಗಿ ಹಲವಾರು ಸೋಂಕುಗಳಿಗೀಡಾಗಬಹುದು ಹಾಗೂ ಶಾಶ್ವತ ಬಂಜೆತನ ಉಂಟಾಗಬಹುದು.

ಗರ್ಭನಿರೋಧಕ ಲಸಿಕೆಗಳು ಯೋಗ್ಯವೋ ಅಲ್ಲವೋ ಎಂಬುದರ ಬಗ್ಗೆ ಚಿಂತಿಸಬೇಕಿದೆ. ಇದನ್ನು ಸ್ತ್ರೀಯ ಒಪ್ಪಿಗೆ ಇರಲಿ, ಇಲ್ಲದಿರಲಿ ಸುಲಭವಾಗಿ ನೀಡಬಹುದಾಗಿದೆ. ಸಂಶೋಧನೆಯ ಗುರಿಯೇನೆಂದರೆ ಒಂದು ಬಾರಿ ಲಸಿಕೆ ಪ್ರಯೋಗ ಮಾಡಿದರೆ ಕನಿಷ್ಠ ಒಂದರಿಂದ ಎರಡು ವರ್ಷಗಳಾದರೂ ಪರಿಣಾಮ ಬೀರುವಂತಿರಬೇಕು. ಮಧ್ಯದಲ್ಲಿ ಅದರಿಂದ ದುಷ್ಪರಿಣಾಮಗಳುಂಟಾದರೆ ನಿಲ್ಲಿಸುವುದು ಅಸಾಧ್ಯ. ಅಲ್ಲದೆ, ಲಸಿಕೆಯ ದುರುಪಯೋಗವಾಗದಂತೆ ನೋಡಿಕೊಳ್ಳುವುದೂ ಅವಶ್ಯಕ.

ಗರ್ಭನಿರೋಧಕ ಲಸಿಕೆಯ ಸಂಶೋಧನೆಯು ಸಾಮಾಜಿಕವಾಗಿ ಹಾಗೂ ನೈತಿಕವಾಗಿ ಕೆಟ್ಟ ಪರಿಣಾಮ ಬೀರುವುದು ಚರ್ಚೆಯಲ್ಲಿ ಯಾರ ಗಮನಕ್ಕೂ ಬರಲಿಲ್ಲ. ಜನಸಂಖ್ಯೆ ನಿಯಂತ್ರಣದ ಉದ್ದೇಶಕ್ಕಾಗಿ ಮಹಿಳೆಯರು ಅಪಾಯಕರ ಗರ್ಭನಿರೋಧಕ ವಿಧಾನಗಳಿಗೆ ಬಲಿಪಶುಗಳಾಗುತ್ತಿದ್ದಾರೆ ಎಂಬುದು ಈ ಸಂಶೋಧಕರಿಗೆ ತೀರಾ ಗೌಣವಾಗಿ ಕಂಡಿರಬೇಕು. ಸಂಶೋಧನೆಯು ಜನರ ಆರೋಗ್ಯ ರಕ್ಷಣೆ ಮಾಡುವುದರ ಬಗ್ಗೆ ಹಾಗೂ ಗರ್ಭಧಾರಣೆ ಬಗ್ಗೆ ಸ್ವಯಂ ನಿರ್ಧಾರ ತೆಗೆದುಕೊಳ್ಳುವಂತಹವರ ಬಗ್ಗೆ ಇರಬೇಕಾದುದು ಅವಶ್ಯಕವೆಂಬ ಕನಿಷ್ಠಮಟ್ಟದ ತಿಳಿವಳಿಕೆಯೂ ಸಂಶೋಧಕರಿಗೆ ಬೇಡವೆ?

### ಗರ್ಭನಿರೋಧಕ ಲಸಿಕೆಯ ನಿರ್ಬಂಧ

ಅನೇಕ ಮಹಿಳಾ ಸಂಘಟನೆಗಳ ಸದಸ್ಯರು ದೆಹಲಿಯಲ್ಲಿ ಅಂತರಾಷ್ಟ್ರೀಯ ಪ್ರತಿರಕ್ಷಣಾ ವಿಜ್ಞಾನ ಸಮ್ಮೇಳನದ ಉದ್ಘಾಟನೆ ನಡೆಯುವ ಸ್ಥಳದ ಹೊರಗೆ ಗರ್ಭನಿರೋಧಕ ಲಸಿಕೆಯ ಅನೈತಿಕ ಸಂಶೋಧನೆ ಮತ್ತು ಅದರ ಬೆಳವಣಿಗೆಯ ಮೇಲೆ ಶೀಘ್ರವೇ ನಿರ್ಬಂಧ ವಿಧಿಸಬೇಕೆಂದು ಒತ್ತಾಯಿಸಿದರು.

ಏಕೆಂದರೆ ಇದು ಮಹಿಳೆಯರ ಸ್ವಾಸ್ಥ್ಯಕ್ಕೆ ಹಾನಿಕರವಾಗಿದೆ ಮತ್ತು ಅದರಿಂದಾಗುವ ದುಷ್ಪರಿಣಾಮಗಳು ಅಧಿಕ. ಈ ಮೂಲಕ ಜನಸಂಖ್ಯೆ ನಿಯಂತ್ರಣ ಮಾಡಲು ಹೊರಟಿರುವುದು ಜನ ವಿರೋಧಿ ಮತ್ತು ಮಹಿಳಾ ವಿರೋಧಿ ನೀತಿಯೆಂದು ಅವರು ಪ್ರತಿಪಾದಿಸಿದ್ದಾರೆ. ಸಮ್ಮೇಳನದಲ್ಲಿ ಭಾಗವಹಿಸುತ್ತಿದ್ದ ವಿಜ್ಞಾನಿಗಳು ಈ ಗರ್ಭನಿರೋಧಕ ಲಸಿಕೆ ಸಾಮಾಜಿಕವಾಗಿ ಹಾಗೂ ನೈತಿಕವಾಗಿ ನ್ಯಾಯಯುತವಾಗಿದೆ ಎಂದು ಮಹಿಳಾ ಸಂಘಟನೆಗಳಿಗೆ ದೃಢಪಡಿಸಲು ಅಸಮರ್ಥರಾದರು.

ಮಹಿಳಾ ಸಂಘಟನೆಗಳು ಹೇಳುವುದೇನೆಂದರೆ ಗರ್ಭನಿರೋಧಕ ಲಸಿಕೆಯ ವಿರುದ್ಧ ಹೋರಾಡುತ್ತಿರುವ ಉದ್ದೇಶವು ಮಹಿಳೆ 'ಗರ್ಭ ಧರಿಸುವುದೇ ಒಂದು ರೋಗ' ಎಂದು ಪರಿಗಣಿಸುತ್ತಿರುವುದರಿಂದ ಹಾಗೂ ಈ ಲಸಿಕೆಯ

CPMG/KA/BG-8/2003-05 RNI No. 45577/88

*Posted at Basavanagudi P.O. On the 25th of every Month*

ಪ್ರಯೋಗದಿಂದ ಸ್ತ್ರೀಯರ ರೋಗನಿರೋಧಕ ಶಕ್ತಿ ಕುಗ್ಗಿ ಅನೇಕ ರೋಗಗಳಿಗೆ ಬಲಿಯಾಗುವುದಲ್ಲದೆ ಶಾಶ್ವತವಾಗಿ ಬಂಜೆತನವೂ ಉಂಟಾಗಬಹುದಾದ್ದರಿಂದ ಲಸಿಕೆಯ ಸಂಶೋಧನೆಯನ್ನು ನಿಲ್ಲಿಸಬೇಕೆಂಬುದಾಗಿದೆ.

ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಿರ್ಬಂಧಿಸಿದ ಲಸಿಕೆಗಳನ್ನು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸ್ತ್ರೀಯರ ಮೇಲೆ ಪರೀಕ್ಷಿಸಲು ಉಪಯೋಗಿಸಲಾಗುತ್ತದೆ. ಇವುಗಳನ್ನು ಹೆಚ್ಚಾಗಿ ಅನಕ್ಷರಸ್ಥ ಮಹಿಳೆಯರ ಮೇಲೆ ಪ್ರಯೋಗಿಸಲಾಗುತ್ತಿದೆ. ಅವರಿಗೆ ಅದರಿಂದುಂಟಾಗುವ ದುಷ್ಪರಿಣಾಮಗಳ ಬಗ್ಗೆ ಅರಿವೇ ಇರುವುದಿಲ್ಲ. ಗರ್ಭ ನಿರೋಧಕಗಳು ಸುರಕ್ಷಿತವಾಗಿರಬೇಕಲ್ಲವೆ? ಅದರ ಬಗ್ಗೆ ಮಹಿಳೆಯರಿಗೆ ಸಂಪೂರ್ಣ ಜ್ಞಾನವಿರಬೇಕಾದುದು ಬಹು ಮುಖ್ಯ. ಎಚ್.ಸಿ.ಜಿ. ವಿರೋಧಿ ಲಸಿಕೆಯನ್ನು ದೆಹಲಿ, ಮುಂಬಯಿ ಹಾಗೂ ಚಂಡೀಗಢದಲ್ಲಿ ಮಹಿಳೆಯರ ಮೇಲೆ ಪ್ರಯೋಗಾತ್ಮಕವಾಗಿ ನೀಡಲಾಗುತ್ತಿದೆ. ಈ ಲಸಿಕೆಯ ಸುರಕ್ಷತೆಯ ಬಗ್ಗೆ ಯಾವುದೇ ಪ್ರಾಯೋಗಿಕ ಆಧಾರಗಳಿಲ್ಲ.

ದೆಹಲಿಯಲ್ಲಿನ ಮಹಿಳಾ ಸಂಘಟನೆಗಳಲ್ಲೊಂದಾದ ಸಹೇಲಿಯು ಹೇಳುತ್ತಿರುವುದೇನೆಂದರೆ 'ಪ್ರಪಂಚದೆಲ್ಲೆಡೆ ಕ್ರೂರವಾದ ಸಂಶೋಧನೆ ನಡೆಯುತ್ತಿದೆ. ಗರ್ಭ ನಿರೋಧಕ ಲಸಿಕೆಯ ಪ್ರಯೋಗಕ್ಕೆ ಸ್ತ್ರೀ ದೇಹ ಉಚಿತವಾಗಿ ಗುರಿಯಾಗುವ ಸ್ಥಳವಾಗಿದೆ'. ಪ್ರಾಣಿಗಳ ಮೇಲೆ ಹೆಚ್ಚಿನ ಅಥವಾ ನಿರ್ಣಾಯಕ ಪ್ರಯೋಗಗಳನ್ನು ನಡೆಸದೆ ಮನುಷ್ಯರ ಮೇಲೆ ನೇರವಾಗಿ ಪ್ರಯೋಗ ನಡೆಸುವುದು ಸರಿಯಲ್ಲವೆಂಬುದು ಪ್ರಯೋಗ ವಿಜ್ಞಾನದ ಇತಿಹಾಸ ಬಲ್ಲವರಿಗೆಲ್ಲಾ ತಿಳಿದಿದೆ.

ನಮ್ಮ ದೇಶದ ಶೇಕಡಾ 90 ಭಾಗ ಮಹಿಳೆಯರು ರಕ್ತಹೀನತೆ ಹಾಗೂ ನ್ಯೂನ ಪೋಷಣೆಯಿಂದ ಬಳಲುತ್ತಿದ್ದಾರೆ. ಅವರಿಗೆ ಸಾಕಷ್ಟು ಉತ್ತಮ ಆಹಾರ, ಶುದ್ಧವಾದ ನೀರು ಹಾಗೂ ಪ್ರಾಥಮಿಕ ಆರೋಗ್ಯ ರಕ್ಷಣೆಯ ಬಗ್ಗೆ ತಿಳುವಳಿಕೆಯಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರ ಆರೋಗ್ಯವನ್ನು ಇನ್ನಷ್ಟು ಹದಗೆಡಿಸುವ ಹಾಗೂ ಜೀವನಪೂರ್ತಿ ಕಾಯಿಲೆಯಿಂದ ನರಳಬೇಕಾದ ಪರಿಸ್ಥಿತಿ ತಂದೊಡ್ಡುವಂತಹ ಗರ್ಭನಿರೋಧಕ ಲಸಿಕೆಯ ಅವಶ್ಯಕತೆ ನಮಗಿದೆಯೆ?

- *ಕೃಪೆ : 'ಹೊಸತು'*

★

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri